ಶ್ರೀರಾಘವೇಂದ್ರ ಗ್ರಂಥಪ್ರಕಾಶನದ ಹನ್ನೊಂದನೆಯ ಕುಸುಮ

"स्वल्पमप्यस्य धर्मस्य त्रायते महतो भयात् "

॥ ಶ್ರೀರುಕ್ಮಿಣೀಶೋಪಾಸಕಃಪ್ರಸೀದತು ॥



# "ಶ್ರೀರಾಘವೇಂದ್ರಾಣುವಿಜಯಃ"

(ಶ್ರೀರಾಯರ ಸಂಕ್ಷಿಪ್ತ ಚರಿತ್ರೆ)

ಕನ್ನಡ ಅರ್ಥಾನುವಾದಸಹಿತ

ಮೂಲ ಲೇಖಕರು :

ವಿ॥ ಸಾಹಿತ್ಯರತ್ನ ಅರ್ಚಕ ವೇದವ್ಯಾಸಾಚಾರ್ಯ

ಅನುವಾದಕರು :

ಸೀತಾತನಯ

(ARK)

ಪ್ರಕಾಶಕರು :

ಶ್ರೀರಾಘವೇಂದ್ರ ಗ್ರಂಥಪ್ರಕಾಶನ ಮಂದಿರ

ಮಂತ್ರಾಲಯ--518 345

ಸ್ಥಾಪನೆ : 21-10-1977 ದೂರವಾಣಿ : ನಂ. 27

# ಶ್ರದ್ಧಾಂಜಲಿ

ಗ್ರಂಥಕರ್ತೃಗಳ ಜ್ಯೇಷ್ಠಪುತ್ರರಾದ, ದ್ವೈತಭೂಷಣ, ವಿದ್ವಾನ್, ಶಿರೋಮಣಿ, **ಶ್ರೀರಾಘವೇಂದ್ರಾಚಾರ್ಯ,** ಶ್ರೀರಾಘವೇಂದ್ರಗುರುಸಾರ್ವಭೌಮರ ಮೂಲಬೃಂದಾವನದ ವಂಶಪರಂಪರಾ ಅರ್ಚಕರು. ಇವರು, ತಮ್ಮ ತಂದೆಯವರು ವೈಕುಂಠಕ್ಕೆ ತೆರಳಿದ ಸಮಯದಲ್ಲಿ ಅವರ ಚರಣಕಮಲಗಳಲ್ಲಿ ಸಮರ್ಪಿಸಿದ ಶ್ರದ್ಧಾಂಜಲಿ.

ಹಾ ವ್ಯಾಸಾರ್ಯಸದಿಷ್ಟದಪ್ರವಿಲಸಜ್ಜ್ಞಾನ್ಯಕಲ್ಪವೃಕ್ಷಂ ತಥಾ
ಧೇನುಂ ಕಾಮಿತವರ್ಷಣಪ್ರವಿತತಾಂ ತ್ಯಕ್ತ್ವಾ ಕುತಸ್ತ್ವಾಂ ದಿವಂ ।
ಯಾತಸ್ತ್ವಂ ತ್ರಿದಿವೇಽಸ್ತಿ ಕಿಂ ಸುಖತಮಂ ಶ್ರೀರಾಘವೇಂದ್ರಪ್ರಭೋಃ
ಸೇವಾದಿವ್ಯಧುರಂಧರಾಮಲಮತೇ ವೇದಾಂತರತ್ನಾಧುನಾ ॥ ೧

ಶ್ರೀಮತ್ಸುಶೀಲಪುರುಹೂತಮುಖಾರವಿಂದಾತ್ಪೀತ್ವಾ ಸುಧಾಂ
ಪರಿಮಲೇನ ಯುತಾಂ ಸಮಗ್ರಾಂ ।
ಆದ್ಯಾದಿತೇಯಸದನೇ ಪರಿಪಾತುಮಿಚ್ಛಾ
ರಿಕ್ತಾಂ ಸುಧಾಂ ಕುತ ಅಭೂದಿತಿ ಚಿತ್ರಮೇತತ್ ॥ ೨

ಸಿಸ್ನಾತುಕಾಮೋಽಸಿ ಸುರಾಪಗಾಯಾಂ
ರಾರಾಜತೇ ಕ್ರೋಡಸುತಾಪ್ರವಾಹಃ ।
ಸ್ವಗ್ರಾಮಮಂತ್ರಾಲಯಸಾರ್ಥನಾಮ್ನಿ
ಕುತಸ್ತವ ಸ್ವರ್ಗಮನಂ ಕೃತೀಂದ್ರ ॥ ೩

ಶ್ರೀರಾಘವೇಂದ್ರಸುರಗೋಶುಭವತ್ಸಯೋಗಿ-
ಶ್ರೀಮಜ್ಜಯೀಂದ್ರಗುರುವರ್ಯಕೃಪಾ ಸಮಗ್ರಾ ।

ಪ್ರಾವರ್ತತಾಽಪಿ ಧರಣೀತಲಮದ್ಯ ವಿದ್ವಂ-
ಸ್ತ್ಯಕ್ತ್ವಾ ಕುತಃಪ್ರಗಮನಂ ಮಮ ಶೋಕಹೇತುಃ ॥ ೪

ಸ್ವಾಂಕೇ ಸಮಾರೋಪ್ಯ ಸುತಂ ಶಿಶುಂ ಮಾಂ
ಮುದೋದರೇ ಪೂರಯಸಿ ಸ್ಮ ವಿದ್ಯಾಂ ।
ಮಾಂ ಪುತ್ರಪೌತ್ರಾದಿಯುತಂ ವಿಹಾಯ
ಗತೋಽದ್ಯ ಭೋ ತಾತ ಕಥಂ ಸಹೇಯ ॥ ೫

ಜಾತಮಾರ್ಯಂ ಚಿತ್ರಭಾನೌ ವತ್ಸರೇ ಶ್ರಾವಣೇಽಸಿತೇ ।
ಪಕ್ಷೇ ತೃತೀಯಾಸುದಿನೇ ಭಕ್ತ್ಯಾ ತಾತಂ ನಮಾಮ್ಯಹಂ ॥ ೬

ಪ್ರಮಾದೀಹಾಯನೇ ಪೌಷೇ ಸಿತೇ ಜೈವಾತೃಕಾತ್ಮಜೇ ।
ವಾಸರೇ ಚ ತೃತೀಯಾಯಾಂ ವಂದೇ ತಾತಂ ದಿವಂ ಗತಂ ॥ ೭

ವೇದವ್ಯಾಸಾರ್ಯಪುತ್ರೇಣ ರಾಘವೇಂದ್ರೇಣ ಸಂತತಂ ।
ತದ್ಧ್ಯಾನಾಸಕ್ತಮನಸಾ ದತ್ತಾ ಶ್ರದ್ಧಾಂಜಲಿಃ ಶುಭಾ ॥ ೮

## ಇವುಗಳ ಭಾವಾರ್ಥವು

ಹಾ ತಂದೆಗಳಾದ ವೇದವ್ಯಾಸಾಚಾರ್ಯರೇ, ಕೇಳಿದ್ದನ್ನು ಕೊಡತಕ್ಕ ಕಾಮಧೇನುಕಲ್ಪವೃಕ್ಷಗಳಂತೆ ಭೂಮಿಯಲ್ಲೇ ಇರುವ ಶ್ರೀಶ್ರೀಗುರುರಾಜರನ್ನು ಬಿಟ್ಟು ಸ್ವರ್ಗದಲ್ಲಿ ಹೆಚ್ಚಿನದೇನಿದೆ ! ಶ್ರೀಮತ್ಸುಶೀಲೇಂದ್ರಗುರುಗಳಿಂದ ಪರಿಮಳ ಯುಕ್ತವಾದ ಶ್ರೀಸುಧೆಯನ್ನು ಪಾನಮಾಡಿ, ಸ್ವರ್ಗದಲ್ಲಿ ಪರಿಮಳರಹಿತವಾದ ಸುಧಾಪಾನಕ್ಕೆ ಹೋದದ್ದು ನೋಡಿದರೆ ಆಶ್ಚರ್ಯವೆನಿಸುತ್ತದೆ. ಸ್ವರ್ಗಂಗೆಯಲ್ಲಿ ಸ್ನಾನಮಾಡಬೇಕೆಂಬ ಅಪೇಕ್ಷೆ ಇದ್ದರೆ 'ಸುರಪನಾಲಯದಂತೆ' ಎಂದು ದಾಸರಿಂದ ಹೊಗಳಲ್ಪಟ್ಟ ಮಂತ್ರಾಲಯದಲ್ಲಿ ಪಂಚಗಂಗೆಯಲ್ಲಿ ಸೇರಿದ ತುಂಗಭದ್ರಾನದಿ ಇದೆ. ಶ್ರೀಶ್ರೀಗುರುರಾಜರೆಂಬ ಕಾಮಧೇನುವಿನ ಮಂಗಳಕರಕರುವಿನಂತೆ ಇರ ತಕ್ಕ ಶ್ರೀಸುಜಯೀಂದ್ರತೀರ್ಥರ ದಿವ್ಯಕೃಪಾ ನಿಮ್ಮಲ್ಲಿರುವಾಗ ಯಾವ ಇಷ್ಟಾ

ರ್ಥಕ್ಕೂ ಕಡಿಮೆ ಇಲ್ಲದೇ ಇದ್ದಾಗ ನನಗೆ ದುಃಖವನ್ನು ಪಡಿಸುವ ನಿಮ್ಮ ಗಮ
ನದ ಕಾರಣ ತಿಳಿಯಲಿಲ್ಲ. ಬಾಲಕನಾದ ಐದುವರ್ಷವುಳ್ಳ ನನ್ನನ್ನು ತೊಡಿಯ
ಮೇಲೇ ಕೂಡಿಸಿಕೊಂಡು ನನಗೆ ಸಂಪೂರ್ಣ ವಿದ್ಯೆಯನ್ನು ಹೇಳಿ, ಈಗ ಮಕ್ಕಳು
ಮೊಮ್ಮಕ್ಕಳು ಮರಿಮಕ್ಕಳು ಮುಂತಾದವರಿಂದ ಕೂಡಿದ ನನ್ನನ್ನು ಬಿಟ್ಟು
ಹೋದದ್ದನ್ನು ನಾನು ಹೇಗೆ ಸಹನಮಾಡಬೇಕು.

ಚಿತ್ರಭಾನು ಶ್ರಾವಣ ಕೃಷ್ಣ ತೃತೀಯಾ ದಿನದಲ್ಲಿ ಜನಿಸಿದ, ಪ್ರಮಾದಿ
ಸಂ॥ ಪೌಷ ಶು॥ ೨ ದಿನದಲ್ಲಿ ವೈಕುಂಠಯಾತ್ರೆಯನ್ನು ಮಾಡಿದ ತಂದೆಗಳಿಗೆ
ನಮಸ್ಕರಿಸಿ ಅವರ ಚರಣಕಮಲಗಳಲ್ಲಿ ಅರ್ಪಿಸಿದ ಶ್ರದ್ಧಾಂಜಲಿ.





# ಅನುವಾದಕನ ನುಡಿ

ನಮ್ಮ ಪೂಜ್ಯ ತಾತಂದಿರಾದ ದಿವಂಗತ, ಪಂಡಿತ ಶ್ರೀ ಅರ್ಚಕ ವೇದವ್ಯಾಸಾಚಾರ್ಯರವರಿಂದ ರಚಿಸಲ್ಪಟ್ಟ "ಶ್ರೀರಾಘವೇಂದ್ರಾಣುವಿಜಯ" ವೆಂಬ ಗ್ರಂಥವು ಪ್ರಚಾರದಲ್ಲಿದ್ದುದು ಆಸ್ತಿಕರೂ ಶ್ರೀ ಶ್ರೀಗುರುರಾಜರ ಭಕ್ತರೂ ಆದವರಿಗೆ ವಿದಿತವಿಷಯವೇ ಆಗಿದೆ. ಆದರೆ ಅದು ಸಂಸ್ಕೃತದಲ್ಲಿ ಇರುವದರಿಂದ ಕನ್ನಡವನ್ನಷ್ಟೇ ಕಲಿತ ಕನ್ನಡಿಗರಿಗೂ ಕೂಡಾ ಅದರ ಸ್ವಾರಸ್ಯವನ್ನು ತಿಳಿಸಲು ಆದಕ್ಕೆ ಕನ್ನಡಾರ್ಥವನ್ನು ಬರೆದು ತದ್ವಾರಾ ಪೂಜ್ಯ ಶ್ರೀ ತಾತಾ ಅವರಿಗೆ ವಾಙ್ಮಯಸೇವೆಯನ್ನು ಸಲ್ಲಿಸಿರುವೆನು.

ಈ ಕೃತಿಯ ಕರಡುಪ್ರತಿಯನ್ನು ಆಕಸ್ಮಿಕವಾಗಿ ಕಂಡ ಶ್ರೀ ಎಸ್. ಬಿ. ಸತ್ತೂರು, ಧಾರವಾಡ ಇವರು, ಇದನ್ನು ಮುದ್ರಿಸಲೇಬೇಕೆಂದು ಒತ್ತಾಯಿಸಿ ೨೦೧/– ರೂ. ಗಳನ್ನು ಸಹಾಯಮಾಡಿದುದಕ್ಕಾಗಿ ಅಭಿನಂದಿಸುತ್ತೇನೆ.

"ಶ್ರೀರಾಘವೇಂದ್ರಾಣುವಿಜಯ" ಸಂಸ್ಕೃತ ಗ್ರಂಥಕರ್ತೃಗಳು ಹೇಗೆ, ತಮ್ಮ ಪ್ರಪೌತ್ರಮುಖಾವಲೋಕನಮಹೋತ್ಸವವನ್ನು ಸತಿಯಿಂದೊಡಗೂಡಿ ನೆರವೇರಿಸಿಕೊಂಡರೋ, ಆದರಂತೆಯೇ ೧೪–೮–೧೯೮೨ ರಂದು ಅವರ ಜ್ಯೇಷ್ಠ ಪುತ್ರರೂ ನಮ್ಮ ತೀರ್ಥರೂಪರೂ ಆದ ಶ್ರೀ ವಿದ್ವಾನ್ ಶಿರೋಮಣಿ ಅರ್ಚಕ, ರಾಘವೇಂದ್ರಾಚಾರ್ಯರೂ ಕೂಡಾ ತಮ್ಮ ಧರ್ಮಪತ್ನಿಯಿಂದ ಕೂಡಿಕೊಂಡೇ ತಮ್ಮ ಪ್ರಪೌತ್ರಮುಖಾವಲೋಕನೋತ್ಸವವನ್ನು ನೆರವೇರಿಸಿಕೊಂಡ ಸಂದರ್ಭ ದಲ್ಲಿ ಉತ್ಸವದ ಸವಿನೆನಪಿಗಾಗಿ ಶ್ರೀ ಶ್ರೀರಾಘವೇಂದ್ರಗುರುಸಾರ್ವಭೌಮರ ಅಡಿದಾವರೆಗಳಲ್ಲಿ ಈ ಕೃತಿಯನ್ನರ್ಪಿಸಲಾಗಿದೆ.

ತಮಗೆ ಎಷ್ಟೇ ಕೆಲಸಗಳಿದ್ದರೂ ಬಿಡುಗೊತ್ತಿ, ಇದು ಶ್ರೀಗುರುಗಳ ಸೇವೆ ಎಂದು ಭಾವಿಸಿ ತಿದ್ದಿ ಸರಿಪಡಿಸಿದ (ಪ್ರೂಫ್ ಕರೆಕ್ಷನ್ ಮಾಡಿದ) ಹರಿದಾಸರತ್ನಂ ಶ್ರೀ ಗೋಪಾಲದಾಸರು, ಬೆಂಗಳೂರು ಇವರಿಗೆ ಹಾಗೂ ಸಕಾಲಕ್ಕೆ ಅಂದವಾಗಿ ಮುದ್ರಿಸಿದ "ಶ್ರೀ ವಿಜಯ ಮುದ್ರಣಾಲಯ"ದವರಿಗೂ ಆಭಾರಿಯಾಗಿರುವೆ.

ಸಹೃದಯಿಗಳು ಇದರಲ್ಲಿಯ ಲೋಪದೋಷಗಳನ್ನು ತಿಳಿಸಿದಲ್ಲಿ ಮುಂದಿನ ಮುದ್ರಣದಲ್ಲಿ ಸರಿಪಡಿಸುವೆನು. ಜನತೆಯು ಈ ಕೃತಿಯನ್ನು ಸ್ವೀಕರಿಸಿ ಓದಿ, ಶ್ರೀ ಶ್ರೀಗುರುರಾಜರ ಹಾಗೂ ಅವರ ಉಪಾಸ್ಯಮೂರ್ತಿಯಾದ ಶ್ರೀರುಕ್ಮಿಣೀಶನ ಅನುಗ್ರಹಕ್ಕೆ ಪಾತ್ರರಾಗಲಿ ಎಂದು ಹಾರೈಸುವೆ.

ಶ್ರೀಗುರುಕೃಪಾಭಿಲಾಷಿ,

**"ಸೀತಾತನಯ"**



| ಪುಟ | ಪಙ್ತ್ತಿ | ಅಶುದ್ಧ | ಶುದ್ಧ |
|---|---|---|---|
| 6 | 15 | ಊಷತುಃಭೂರ್ವನಗಿರೌ | ಊಷತುರ್ಭೂರ್ವನಗಿರೌ |
| 7 | 16 | ನಾಯಕಂ | ನಾಮಕಂ |
| 17 | 11 | ಪ್ರವಿಶನ್ಮಠ | ಪ್ರಾವಿಶನ್ಮಠ |
| 20 | 16 | ನೋಡಿಯೇ | ನೋಡಿಯೋ ಎಂಬಂತೆ |
| 23 | 7 | ಕಂಚಿದ್ವಿಜವರಃ | ಕಂಚಿದ್ದ್ವಿಜವರಃ |
| ,, | 17 | ವೇಂಕಟಾಚಾರ್ಯರ್ಯಂ | ವೇಂಕಟಾರ್ಯರ್ಯಂ |
| 32 | 21 | ಗುರುಂ | ಗುರುಃ |
| 36 | 20 | ಹೋ ! | ಭೋ ! |
| 40 | 13 | ತತ್ವದ್ವ್ಯಾಪಿ | ತತ್ತ್ವದ್ವ್ಯಾಪಿ |
| 45 | 19 | ಜಯರಾಮಾಭಿದಂ | ಜಯರಾಮಾಭಿಧಂ |
| 66 | 15 | ಹಾಮಾಹ್ಮ್ಯಂ | ಮಾಹಾತ್ಮ್ಯಂ |
| 68 | 3 | ತೋಷಯೇದ್ಯದಿ | ತೋಷಯೇರ್ಯದಿ |
| 71 | 8 | ಸಂಸ್ಥಪಯದ್ಭಿಃ | ಸಂಸ್ಥಾಪಯದ್ಭಿಃ |
| 72 | 16 | ಭುಂಜಂತಿ | ಭುಂಜತಿ |
| 74 | 17 | ರುರುದಸ್ತದಾ | ರುರುದುಸ್ತದಾ |
| 75 | 7 | ವಿಪ್ರಸೂನುರ್ವಿತ್ತ | ವಿಪ್ರಸೂನುಂ ವಿತ್ತ |
| ,, | 11 | ಶ್ರೀಗುರಣೋದಿತಂ | ಶ್ರೀಗುರುಣೋದಿತಂ |
| 78 | 25 | ಸತ್ಯಾಯಾತಿ | ಸತ್ಯಾಯತಿ |
| 86 | 3 | ಗೃಹಷಷ್ಠಿ | ಗೃಹಷಷ್ಠಿಂ |
| ,, | 10 | ಗೀತಾಯಾಶ್ಚ ಸ್ಸು | ಶ್ರೀಗೀತಾಯಾಸ್ಸು |
| ,, | 17 | ಸ ವ್ಯಾಖ್ಯಾ | ಸದ್ವ್ಯಾಖ್ಯಾ |
| 92 | 1 | ಚಕ್ರುನಿರಂತಂ | ಚಕ್ರುರ್ನಿರಂತರಂ |
| 93 | 17 | ನಾಮೀ | ನಾಮ್ನೊ |
| 99 | 18 | ಪಾಠಂ | ಪಾಠಃ |
| 103 | 16 | ಪಂಡಿತರಿಂದ | ಪಂತರಿಂದ |

ಗ್ರಂಥಕರ್ತ



ದಿ|| ಸಾಹಿತ್ಯರತ್ನ ಅರ್ಚಕ ವೇದವ್ಯಾಸಾಚಾರ್ಯರು

(ಶ್ರೀ ಶ್ರೀರಾಘವೇಂದ್ರಗುರುಸಾರ್ವಭೌಮರ ಮೂಲಬೃಂದಾವನದ ವಂಶಪರಂಪರಾ ಅರ್ಚಕರು, ಮಂತ್ರಾಲಯ)



ಗ್ರಂಥಕರ್ತರ ಜ್ಯೇಷ್ಠಪುತ್ರರಾದ

**ಅರ್ಚಕ ಶ್ರೀ ರಾಘವೇಂದ್ರಾಚಾರ್ಯರು**

ಮತ್ತು

ಅವರ ಧರ್ಮಪತ್ನೀ

**ಶ್ರೀಮತಿ ಸೀತಾಬಾಯಿಯವರು (ರಾಘವಮ್ಮ)**



ಶ್ರೀ ಎ. ಆರ್. ಕೃಷ್ಣಾಚಾರ್ಯರು

(ಮೂಲ ಗ್ರಂಥಕರ್ತರ ಜ್ಯೇಷ್ಠ ಪೌತ್ರರು–ಅನುವಾದಕರು)

ಶ್ರೀಃ

# ಶ್ರೀರಾಘವೇಂದ್ರಾಣುವಿಜಯಃ

## ಪ್ರಥಮಸ್ಸರ್ಗಃ—ಮೊದಲನೆಯ ಸರ್ಗವು

ಗ್ರಂಥಕರ್ತರು ತಮ್ಮಿಂದ ರಚಿಸುವ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿ ಹೊಂದಲಿ ಎಂದು ದೇವತಾಸ್ತುತಿರೂಪವಾದ ಮಂಗಲಾಚರಣ ವನ್ನು ಮಾಡುತ್ತಾ, ಶ್ರೀಗುರುರಾಜರ ಬೃಂದಾವನದಲ್ಲಿ ಶ್ರೀಭಗವಂತನ ಐದು ರೂಪಗಳಿದ್ದು ಸೇವಿಪರ ಮನದಿಷ್ಟವನ್ನು ಪೂರೈಸುವವು ಎನ್ನುವದನ್ನು ವರ್ಣಿಸಿರುತ್ತಾರೆ.

**ಶ್ರೀಕೃಷ್ಣಕೃಷ್ಣನರಸಿಂಹಸುರಾಮಚಂದ್ರಾನುದ್ವಾಹಬುದ್ಧಿ-**
**ಭಯನಾಶನಭುಕ್ತಿದಾಂಶ್ಚ ।**
**ನಾರಾಯಣಂ ಚ ಶುಭಚಕ್ರಸುರೂಪಿಣಂ ಚ ಶ್ರೀರಾಘ-**
**ವೇಂದ್ರಗುರುರಾಜಮಹಂ ನಮಾಮಿ ॥೧॥**

ವಿವಾಹ, ಬುದ್ಧಿ, ಭಯನಾಶನ, ಜೀವನೋಪಾಯವನ್ನು ಕೊಡುವ ಶ್ರೀಕೃಷ್ಣವೇದವ್ಯಾಸನರಸಿಂಹರಾಮಚಂದ್ರದೇವರ ರೂಪಗಳನ್ನು ಮತ್ತು ಮಂಗಳಪ್ರದನಾದ ಚಕ್ರರೂಪಿಯಾದ ಸುಂದರರೂಪೀನಾರಾಯಣನನ್ನು ಹಾಗೂ ಶ್ರೀರಾಘವೇಂದ್ರಗುರುರಾಜರನ್ನೂ ನಮಸ್ಕರಿಸುವೆನು.

ವಿಘ್ನಗಳು ಬಹಳವಿರುವದು ಸ್ವಾಭಾವಿಕವಾದಪ್ರಯುಕ್ತ ವಿಘ್ನಗಳ ನಾಶದ ಉದ್ದಿಶ್ಯ, ಇನ್ನೊಂದು ಸಲ ನಮಸ್ಕರಿಸುತ್ತಾ ತಮ್ಮಿಂದ ರಚಿಸುವ ಗ್ರಂಥದ ವಿಚಾರವನ್ನು ತಿಳಿಸುತ್ತಲಿದ್ದಾರೆ—

**ಶ್ರೀನಾರಾಯಣರಾಮಕೃಷ್ಣತನುಭಿರ್ವ್ಯಾಪ್ತೇ ಸುವೃಂದಾವನೇ**
**ಶ್ರೀಚಕ್ರಾಂಕಿತಮೂರ್ತಿಭಿಶ್ಚ ಲಸಿತೇ ಪೂರ್ಣಪ್ರಮತ್ಯಾದಿಭಿಃ ।**
**ರಾಮಧ್ಯಾನಪರಾಯಣಂ ಯತಿವರಂ ನತ್ವಾ ಪ್ರವಕ್ಷ್ಯಾಮ್ಯಹಂ**
**ಶ್ರೀಮನ್ಮಂತ್ರಪುರಸ್ಥಿತಸ್ಯ ಸುಗುರೋಶ್ಚಿತ್ರಂ ಚರಿತ್ರಂ ಮುದೇ ॥೧॥**

ಶ್ರೀನಾರಾಯಣ ರಾಮ ಕೃಷ್ಣ ಈ ರೂಪದಿಂದ ಮತ್ತು ಶ್ರೀಚಕ್ರಾಂಕಿತ ಮೂರ್ತಿಗಳಿಂದ ತುಂಬಿದ, ಶ್ರೀಮದಾಚಾರ್ಯರೇ ಮೊದಲಾದ ಯತಿಗಳಿಂದ ವಿಲಸಿತವಾದ (ಬೃಂದಾವನದಲ್ಲಿ) ಶ್ರೀರಾಮಧ್ಯಾನದಲ್ಲಿ ಆಸಕ್ತರಾದ ಯತಿಶ್ರೇಷ್ಠರನ್ನು ನಮಿಸಿ, ಶ್ರೀಮನ್ಮಂತ್ರಾಲಯಪುರದಲ್ಲಿರುವ ಶ್ರೀಗುರುಗಳ ವಿಚಿತ್ರವಾದ ಚರಿತ್ರೆಯನ್ನು ನಾನು ಭಕ್ತರ ಸಂತೋಷದ ಸಲುವಾಗಿ ಹೇಳುವೆ.

ಈ ಗ್ರಂಥರಚನೆಯು ಶೀಘ್ರದಲ್ಲಿ ಮುಗಿಯಲಿ ಎಂಬ ಉದ್ದೇಶದಿಂದ ಗ್ರಂಥಪ್ರತಿಪಾದ್ಯರಾದ ತಮ್ಮ ಇಷ್ಟಗುರುಗಳಾದ ಶ್ರೀರಾಘವೇಂದ್ರಗುರುಗಳನ್ನು ಪ್ರಾರ್ಥಿಸುತ್ತಾ ತಮ್ಮಿಂದ ರಚಿಸುವ ಗ್ರಂಥದ ಹೆಸರನ್ನು ಉಲ್ಲೇಖಿಸಿದ್ದಾರೆ—

**ಯೋಗೀಂದ್ರನುತಪಾದಾಬ್ಜಂ ರಾಘವೇಂದ್ರಗುರೂತ್ತಮಮ್ ।**
**ತಸ್ಯಾಣುವಿಜಯಸ್ಯಾಽಹಂ ಯಾಚೇ ಶೀಘ್ರಸಮಾಪ್ತಯೇ ॥೨॥**

ಶ್ರೀಯೋಗೀಂದ್ರತೀರ್ಥರಿಂದ ನಮಸ್ಕರಿಸಲ್ಪಟ್ಟ ಪಾದಕಮಲಗಳುಳ್ಳ ಗುರುಶ್ರೇಷ್ಠರಾದ ಶ್ರೀರಾಘವೇಂದ್ರರನ್ನು **ರಾಘವೇಂದ್ರ ಅಣುವಿಜಯ** ಎಂಬ ಗ್ರಂಥದ ಶೀಘ್ರಪರಿಸಮಾಪ್ತಿಗೋಸ್ಕರ ನಾನು ಬೇಡುವೆ.

ಗ್ರಂಥಕರ್ತರು ಈ ಗ್ರಂಥದಲ್ಲಿ ಹೇಳಲ್ಪಟ್ಟಿದ್ದು ಸ್ವಕಪೋಲಕಲ್ಪಿತವಲ್ಲ, ಶ್ರೀರಾಯರ ಸೋದರಳಿಯಂದಿರಾದ ಪಂಡಿತ ಶ್ರೀ ನಾರಾಯಣಾಚಾರ್ಯರಿಂದ ರಚಿಸಲ್ಪಟ್ಟ ೧೦ ಸರ್ಗಗಳುಳ್ಳ **ಶ್ರೀರಾಘವೇಂದ್ರವಿಜಯ** ಮಹಾಕಾವ್ಯದಲ್ಲಿ ಏನು ಹೇಳಿದೆಯೋ ಮತ್ತು ಅಪರೋಕ್ಷಜ್ಞಾನಿಗಳಾದ ದಾಸಶ್ರೇಷ್ಠರುಗಳು ಏನು ಹಾಡಿದ್ದಾರೋ ಅವುಗಳ ಆಧಾರದಿಂದ ಹೇಳಿದ್ದೇನೆ, ಎಂದು ತಿಳಿಸುತ್ತಿದ್ದಾರೆ—

**ರಾಘವೇಂದ್ರವಿಜಯೇ ಯದುಚ್ಯತೇ ದಾಸವರ್ಯವಚನೇ**
**ಚ ಯತ್ಸ್ಥಿತಂ ।**

**ವೃತ್ತಮೇವ ಕಥಿತಂ ಮಯಾ ಚ ತತ್ ಕಲ್ಪಿತಂತ್ವಿಹ**
**ನ ಕಿಂಚದಸ್ತಿ ವೈ ||೪||**

ರಾಘವೇಂದ್ರವಿಜಯದಲ್ಲಿ ಏನು ಹೇಳಲ್ಪಟ್ಟಿದೆಯೋ, ದಾಸಶ್ರೇಷ್ಠರ ವಾಕ್ಯಗಳಲ್ಲಿ ಏನಿದೆಯೋ ಅವುಗಳನ್ನು (ಸಂಗ್ರಹಿಸಿ) ನನ್ನಿಂದ ಶ್ಲೋಕರೂಪದಲ್ಲಿ ಹೇಳಲ್ಪಟ್ಟಿದೆ. ಊಹಿಸಲ್ಪಟ್ಟದ್ದು ಇದರಲ್ಲಿ ಸ್ವಲ್ಪವೂ ಇಲ್ಲ.

**ಪೂರ್ವವಾಚ್ಯಚರಿತಸ್ಯ ಸದ್ಗುರೋರ್ವರ್ಣನೇ**
**ತ್ವಪರಥಾ ಕೃತಿಶ್ಚ ಮೇ |**
**ಕ್ಷಮ್ಯತಾಂ ಪರಿಮಳಾರ್ಯಶಿಷ್ಯಕೈಃಸಾರದರ್ಶನ-**
**ಸುಕೌತುಕೈರ್ನರೈಃ ||೫||**

ಸದ್ಗುರುಗಳಾದ ಶ್ರೀರಾಘವೇಂದ್ರತೀರ್ಥರ ಮೊದಲು ಹೇಳುವ ಚರಿತ್ರೆಯ ವರ್ಣನೆಯು ನನ್ನಿಂದ ಆಮೇಲೆ ಮಾಡಿದ್ದರೆ (ಶ್ರೀಗುರುಗಳ ಚರಿತ್ರೆಯ) ಸಾರವನ್ನು ತಿಳಿದುಕೊಳ್ಳಲು ಕುತೂಹಲಿಗಳಾದ ಶ್ರೀಪರಿಮಳಾಚಾರ್ಯರ ಶಿಷ್ಯರಾದ ಜನರಿಂದ ಕ್ಷಮಿಸಲ್ಪಡಲಿ.

ವಿದ್ಯಾಗುರುಗಳಿಗೆ ನಮಸ್ಕರಿಸಿ ತಮ್ಮಿಂದ ರಚಿತವಾಗುವ ಗ್ರಂಥವು ಎಂತಹುದು ಎನ್ನುವದನ್ನು ಸೂಚಿಸುತ್ತಾರೆ—

**ರಾಘವೇಂದ್ರಾಣುವಿಜಯಃಸಾರಾತ್ಸಾರತರೋ ಮಹಾನ್ |**
**ಅತಶ್ಚ ಶ್ರದ್ಧಯಾ ನತ್ವಾ ಗುರುಂ ವಕ್ಷ್ಯಾಮಿ ನಮ್ರಧೀಃ ||೬||**

ರಾಘವೇಂದ್ರಾಣುವಿಜಯವು ಅತ್ಯಂತಸಾರಭೂತವಾದದ್ದು, ಉತ್ತಮವಾದದ್ದು. ಆದ್ದರಿಂದ ನಮ್ರಬುದ್ಧಿಯುಳ್ಳ ನಾನು ಶ್ರದ್ಧೆಯಿಂದ ವಿದ್ಯಾಗುರುಗಳಾದ **ಶ್ರೀಸುಶೀಲೇಂದ್ರತೀರ್ಥ**ರಿಗೆ ನಮಸ್ಕರಿಸಿ ಹೇಳುವೆ.

ಗ್ರಂಥಕರ್ತರು ತಮ್ಮ ಪೂಜ್ಯತಂದೆಯವರಿಗೆ ನಮಸ್ಕರಿಸಿ ತಮ್ಮ ಹೆಸರನ್ನು ಸೂಚಿಸುತ್ತಾರೆ—

**ಶ್ರೀಮದ್ರಾಜಾಧಿರಾಜಪ್ರಮುಕುಟಮಣಿಭಿರ್ಘಟ್ಟಿತಶ್ರೀಸುಪಾದಮ್**
**ಶ್ರೇಷ್ಠಂ ಶ್ರೀರಾಘವೇಂದ್ರಪ್ರಭುವರಮತುಲಂ ಪ್ರತ್ಯಹಂ**
**ಸ್ವರ್ಚಯಂತಂ |**

**ಶ್ರೀಮತ್ಸಿದ್ಧಾಂತಸಾರಪ್ರಕುಶಲಪಿತರಂ ರಾಮಚಂದ್ರಾಭಿದಾನಂ**
**ವ್ಯಾಸೇನಾಣುಸುರಾಘವೇಂದ್ರವಿಜಯೋ ರಾರಾಜಿ ಭಕ್ತ್ಯಾ ಮುದಾ ||೭||**

ಶ್ರೀಮದ್ರಾಜಾಧಿರಾಜರ ಕಿರೀಟದ ಮಣಿಗಳಿಂದ ಸ್ಪೃಷ್ಟವಾದ, ಕಾಂತಿ ಯುಕ್ತವಾದ ಪಾದವುಳ್ಳ, ಶ್ರೇಷ್ಠ ಶ್ರೀರಾಘವೇಂದ್ರಪ್ರಭುವರರನ್ನು ನಿರಂತರ ದಲ್ಲಿ ಸಂತೋಷದಿಂದ ಪೂಜಿಸುವ, ಶ್ರೀಮಧ್ವಸಿದ್ಧಾಂತಸಾರದಲ್ಲಿ ಅತ್ಯಂತ ಕುಶಲರಾದ (ನಮ್ಮ) ತಂದೆಗಳಾದ **ರಾಮಚಂದ್ರ** ಎಂದು ಹೆಸರುಳ್ಳವರನ್ನು (ಶ್ರೀರಾಮಚಂದ್ರಾಚಾರ್ಯರನ್ನು) ನಮಸ್ಕರಿಸಿ, ವ್ಯಾಸನಿಂದ (ಶ್ರೀವೇದ ವ್ಯಾಸಾಚಾರ್ಯರಿಂದ) ಶ್ರೇಷ್ಠವಾದ ಶ್ರೀರಾಘವೇಂದ್ರಾಣುವಿಜಯವು ಭಕ್ತಿಯಿಂದ ಸಂತೋಷದಿಂದ, ರಚಿಸಲ್ಪಟ್ಟಿತು.

**ಅಸ್ಮಿನ್ ಭರತಖಂಡೇ ತು ವಿಜಯಾಭಿದಪತ್ತನಮ್ |**
**ತತ್ರ ವಾಸಃ ಕೃತಃ ಪೂರ್ವಂ ಕೈಶ್ಚಿದ್ಗೌತಮಗೋತ್ರಜೈಃ ||೮||**

ಈ ಭರತಖಂಡದಲ್ಲಿ ವಿಜಯನಗರ ಎಂಬ ಪಟ್ಟಣವು. ಅಲ್ಲಿ ಕೆಲಗೌತಮ ಗೋತ್ರದವರು ವಾಸವಾಗಿದ್ದರು.

**ತಸ್ಮಿನ್ವಂಶೇ ಕೃಷ್ಣಭಟ್ಟೋ ವೇದವಿದ್ಯಾವಿಶಾರದಃ |**
**ವೀಣಾವಿದ್ಯಾಪ್ರವೀಣತ್ವಾದ್ವೀಣಾಪೂರ್ವೋಽಭವತ್ಸ ತು ||೯||**

ಆ ಗೌತಮಗೋತ್ರದ ವಂಶದಲ್ಲಿ ವೇದವಿದ್ಯಾವಿಶಾರದರಾದ **ಕೃಷ್ಣ ಭಟ್ಟರು** ಎನ್ನುವರು ಇದ್ದರು. ಆ ಕೃಷ್ಣಭಟ್ಟರಾದರೋ ವೀಣೆವಿದ್ಯೆಯಲ್ಲಿ ಕುಶಲ ರಾದ ಪ್ರಯುಕ್ತ ವೀಣೆ ಎಂಬ ಪದವು ಹೆಸರಿನ ಮೊದಲಾಯಿತು (ವೀಣಾಕೃಷ್ಣ ಭಟ್ಟರು ಎನ್ನುತ್ತಿದ್ದರು).

**ಪುತ್ರಶ್ರೇಷ್ಠಸ್ತಸ್ಯ ಚಾಸೀತ್ ಕನಕಾಚಲನಾಮಕಃ |**
**ತಸ್ಯ ಪುತ್ರೋ ಬಭೂವ ಶ್ರೀವೀಣಾತಿಮ್ಮಣ್ಣಸಂಜ್ಞಕಃ ||೧೦||**

ಆ ಕೃಷ್ಣಭಟ್ಟರಿಗೆ **ಕನಕಾಚಲ** ಎಂಬ ಹೆಸರುಳ್ಳ ಉತ್ತಮನಾದ ಮಗನು ಇದ್ದನು. ಆ ಕನಕಾಚಲಭಟ್ಟರಿಗೆ **ವೀಣಾತಿಮ್ಮಣ್ಣ**ನೆಂಬ ಮಗನಿದ್ದನು.

**ತಸ್ಯ ಪತ್ನೀ ಗೋಪಿಕಾಂಬಾ ಶ್ರೇಷ್ಠಾ ಸಾಧ್ವೀ ಬಭೂವ ಹಿ |**
**ಆಶ್ರಯಸ್ತಸ್ಯ ರಾಜ್ಞಸ್ತು ತ್ರಯಾಣಾಂ ಸಮಜಾಯತ ||೧೧||**

ತಿಮ್ಮಣ್ಣಭಟ್ಟರಿಗೆ ಶ್ರೇಷ್ಠಳಾದ ಸಾಧ್ವಿಯಾದ ಗೋಪಿಕಾಂಬಾ ಎಂಬ ಹೆಂಡತಿಯು ಇದ್ದಳು. ಕೃಷ್ಣಭಟ್ಟರು, ಕನಕಾಚಲಭಟ್ಟರು, ತಿಮ್ಮಣ್ಣಭಟ್ಟರು ಈ ಮೂವರಿಗೂ ಆ ಕಾಲದ ರಾಜನ ಆಶ್ರಯವು ಇದ್ದಿತು.

**ಏವಂ ಕಾಲೇ ಸಮಾಯಾತೇ ತಿಮ್ಮಣ್ಣಸ್ಯ ಸುಧೀಮತಃ ।**
**ಕಸ್ಮಿಂಶ್ಚಿದ್ದಿವಸೇ ತಸ್ಯ ಪುತ್ರಚಿಂತಾ ವ್ಯಜಾಯತ ॥೧೨॥**

ಹೀಗೆ ಕಾಲವು ಕಳೆಯುತ್ತಿರಲು ಒಂದಾನೊಂದು ದಿನ, ಪ್ರಸಿದ್ಧರಾದ ಕುಶಲಿಗಳಾದ ತಿಮ್ಮಣ್ಣಭಟ್ಟರಿಗೆ (ಬಹುದಿನಗಳಾದರೂ) ಮಕ್ಕಳಾಗಲಿಲ್ಲವೆಂಬ ಚಿಂತೆಯು ಹುಟ್ಟಿತು.

**ತತಸ್ತಿಮ್ಮಣ್ಣಭಟ್ಟಾರ್ಯಃಸೇವಾರ್ಥಮಗಮತ್ತದಾ ।**
**ಇಷ್ಟಪ್ರದಂ ವೇಂಕಟೇಶಂ ಗೃಹಿಣ್ಯಾ ಸಹಿತೋ ಮುದಾ ॥೧೩॥**

ಆಮೇಲೆ ಪೂಜ್ಯರಾದ ತಿಮ್ಮಣ್ಣಭಟ್ಟರು ಮಡದಿಯಿಂದ ಕೂಡಿಕೊಂಡು ಸಂತೋಷದಿಂದ ಅಭೀಷ್ಟೆಯನ್ನು ಕೊಡುವ ಶ್ರೀವೇಂಕಟೇಶನನ್ನು ಕುರಿತು, ಸೇವಿಸಲು ಹೊರಟರು.

**ಶೇಷಾದ್ರೌ ಶ್ರೀನಿವಾಸಸ್ಯ ಸೇವಾಂ ಚಕ್ರೇ ಹಿ ಪಂಡಿತಃ ।**
**ಶ್ರೀನಿವಾಸಃಸುಪ್ರಸನ್ನಸ್ತಸ್ಮೈ ಕನ್ಯಾಂ ದದೌ ಪುರಾ ॥೧೪॥**

ಪಂಡಿತರಾದ ತಿಮ್ಮಣ್ಣಭಟ್ಟರು ಶೇಷಾಚಲದಲ್ಲಿ ಶ್ರೀಶ್ರೀನಿವಾಸನ ಸೇವೆಯನ್ನು ಮಾಡಿದರು. ಸೇವೆಯಿಂದ ಸುಪ್ರೀತನಾದ ಶ್ರೀಶ್ರೀನಿವಾಸನು ಮೊದಲು ಹೆಣ್ಣುಮಗುವನ್ನು ಕೊಟ್ಟನು.

**ಅರ್ಥ ವಿಶೇಷ :—** ತಿಮ್ಮಣ್ಣಭಟ್ಟರು ಶ್ರೀಶ್ರೀನಿವಾಸದೇವರನ್ನು ಕೆಲವು ದಿನ ಸೇವಿಸಲಾಗಿ, ಸೇವೆಯಿಂದ ತುಷ್ಟನಾದ ಶ್ರೀಶ್ರೀನಿವಾಸನು ಸ್ವಪ್ನದಲ್ಲಿ ಫಲ ಮಂತ್ರಾಕ್ಷತೆಗಳನ್ನು ಕೊಟ್ಟನು. ಕನಸಿನ ಅರ್ಥವನ್ನು ತಿಳಿದ ಶ್ರೀತಿಮ್ಮಣ್ಣ ಭಟ್ಟರು ಶ್ರೀಶ್ರೀನಿವಾಸದೇವರಿಗೆ ಪೂಜೆ ಸಲ್ಲಿಸಿ ಸತಿಯಿಂದೊಡಗೂಡಿ ಊರಿಗೆ ಮರಳಿದರು. ಕೆಲವು ದಿನದಲ್ಲಿ ಶ್ರೀತಿಮ್ಮಣ್ಣಭಟ್ಟರಿಂದ ಗರ್ಭವನ್ನು ಧರಿಸಿದ ಗೋಪಿಕಾಂಬಾದೇವಿಯು ಹತ್ತನೆಯ ತಿಂಗಳಲ್ಲಿ ಹೆಣ್ಣುಮಗುವಿಗೆ ಜನ್ಮವಿತ್ತಳು.

**ವೇಂಕಟೇಶಸ್ಯ ನಾಮ್ನೈವ ಚಕಾಸಾಮಾಸ ಸಾ ಸುತಾ ।**
**ಪುನಸ್ತಿಮ್ಮಣ್ಣಭಟ್ಟೇನ ಪುತ್ರಾರ್ಥಂ ಸೇವಿತೋ ಹರಿಃ ॥೧೩॥**

ವೇಂಕಟೇಶನ ಹೆಸರಿನಿಂದಲೇ ಆ ಹೆಣ್ಣುಮಗು ಪ್ರಕಾಶಮಾನವಾಯಿತು. (ಶ್ರೀವೇಂಕಟೇಶನ ಅನುಗ್ರಹದಿಂದ ಹುಟ್ಟಿದ ಆ ಹೆಣ್ಣುಕೂಸಿಗೆ **ವೆಂಕಟಾಂಬ** ಎಂದು ಹೆಸರಿಟ್ಟರು.) ಮತ್ತು ತಿಮ್ಮಣ್ಣಭಟ್ಟರಿಂದ ಗಂಡುಮಗುವಿಗೋಸ್ಕರ ಶ್ರೀಶ್ರೀನಿವಾಸನು ಸೇವಿಸಲ್ಪಟ್ಟನು.

**ಸುಸಂತುಷ್ಟಃಶ್ರೀನಿವಾಸಸ್ತಸ್ಮೈ ಪುತ್ರಂ ದದೌ ತದಾ ।**
**ಗುರುರಾಜಶ್ಚೇತಿ ನಾಮ ಕೃತ್ವಾ ಪುತ್ರಸ್ಯ ದಂಪತೀ ॥೧೬॥**

ಆಗ ಅತ್ಯಂತ ತುಷ್ಟನಾದ ಶ್ರೀಶ್ರೀನಿವಾಸನು ತಿಮ್ಮಣ್ಣಭಟ್ಟರಿಗೆ ಗಂಡು ಮಗುವನ್ನು ಕೊಟ್ಟನು. ದಂಪತಿಗಳು ಆ ಗಂಡು ಕೂಸಿಗೆ **ಗುರುರಾಜ** ಎಂದು ನಾಮಕರಣವನ್ನು ಮಾಡಿ,

**ವಿಶೇಷ ವಿಷಯ :**—ಶ್ರೀವೇಂಕಟೇಶದೇವರ ಅನುಗ್ರಹದಿಂದ ಹುಟ್ಟಿದ ಮಗುವಾದಾಗ್ಯೂ ದೇವರ ಅನುಗ್ರಹದಂತೆ ಗುರುಗಳ ಅನುಗ್ರಹವೂ ಆಗಲಿ ಎಂಬ ಉದ್ದೇಶ್ಯದಿಂದ ಈ ಗಂಡುಮಗುವಿಗೆ **ಗುರುರಾಜ** ಎಂದು ಹೆಸರಿಟ್ಟರು.

**ಊಷತುರ್ಭುವನಗಿರೌ ಕಾಂಚೀಪುರಸಮೀಪತಃ ।**
**ವೀಣಾತಿಮ್ಮಣ್ಣಭಟ್ಟಸ್ತು ಸಕುಟುಂಬೋ ಮುಮೋದ ಚ ॥೧೭॥**

ವೀಣಾತಿಮ್ಮಣ್ಣಭಟ್ಟರಾದರೋ ಹೆಂಡತಿಯಿಂದ ಕೂಡಿಕೊಂಡು ಕಾಂಚೀ ಪುರದ ಹತ್ತಿರ ವಿರುವ ಸಂಪದ್ಭರಿತವಾದ "**ಭುವನಗಿರಿ**" ಯೆಂಬಲ್ಲಿ ವಾಸಿಸಿದರು. ಹಾಗೂ (ಇಬ್ಬರು ಮಕ್ಕಳ ಆಟಪಾಟಗಳನ್ನು ನೋಡುತ್ತಾ) ಸಂತೋಷಿಸಿದರು.

**ಏವಂ ಸತಿ ಗತೇ ಕಾಲೇ ಪುನಸ್ತಿಮ್ಮಣ್ಣಧೀಮತಃ ।**
**ಏಕಪುತ್ರೋಽಪ್ಯಪುತ್ರಸ್ಸ್ಯಾದಿತಿ ಚಿಂತಾಭವನ್ಮನು ॥೧೮॥**

ಹೀಗೆ ಸಂತೋಷದಿಂದ ಕಾಲವನ್ನು ಕಳೆಯುತ್ತಿರಲು ಕುಶಲಿಗಳಾದ ತಿಮ್ಮಣ್ಣಭಟ್ಟರಿಗೆ '**ಒಬ್ಬ ಮಗನು ಮಗನಲ್ಲ**' ಎಂಬ ಚಿಂತೆಯು ಆಯಿತು.

ಅ. ವಿ. :—'ಒಬ್ಬ ಮಗ ಮಗನಲ್ಲ ಒಂದು ಕಣ್ಣು ಕಣ್ಣಲ್ಲ' ಎಂಬ ನಾಣ್ಣುಡಿಯನ್ನು ಅನುಸರಿಸಿ, ಹಾಗೂ ದರ್ಶ ಮತ್ತು ಪೂರ್ಣಮಾಸಗಳೆಂಬ ಎರಡು ಯಾಗಗಳನ್ನು ಮಾಡಿದರೇನೇ ಫಲವನ್ನು ಕೊಡುತ್ತವೆಯೋ, ಒಂದು ಯಾಗವನ್ನು ಮಾಡಿದರೆ ಹೇಗೆ ಫಲಕೊಡುವದಿಲ್ಲವೋ, ಅದರಂತೆ ಒಬ್ಬನೇ ಮಗನಿಂದ ಸುಖಸಿಕ್ಕಲಾರದು ಎಂದು ಚಿಂತಿಸಿದರು.

**ಸ್ವನಾಮಸ್ಮರಣೇನೈವ ಯಃಪುನಾತಿ ಜನಾನ್ ಗಿರಿಃ।**
**ತತ್ರ ತೌ ದಂಪತೀ ಶ್ರೀಶಂ ಸಿಷಾವಾತೇ ಪುನರ್ಯದಾ ॥೧೯॥**

ಯಾವ ವೇಂಕಟಾಚಲವು ತನ್ನ ನಾಮಸ್ಮರಣೆಯಿಂದಲೇ ಜನರನ್ನು ಉದ್ಧರಿಸುವದೋ ಆ ವೇಂಕಟಾಚಲದಲ್ಲಿರುವ ಲಕ್ಷ್ಮೀಪತಿಯಾದ ಶ್ರೀಶ್ರೀನಿವಾಸನನ್ನು ಯಾವಾಗ ದಂಪತಿಗಳು ಮತ್ತೆ ಸೇವಿಸಿದರೋ–

**ತಯೋರ್ಭಕ್ತ್ಯಾ ಸುಸಂತುಷ್ಟಃಪುತ್ರಶ್ರೇಷ್ಠಂ ದದೌ ಹರಿಃ।**
**ದೃಷ್ಟ್ವಾತ್ಮಜಂ ಕಾಂತಿಮಂತಂ ಲಭೇತೇ ಸ್ಮ ಸುಖಂ ಸದಾ ॥೨೦॥**

ತಿಮ್ಮಣ್ಣಭಟ್ಟರು ಗೋಪಿಕಾಂಬಾ ಇವರುಗಳ ಭಕ್ತಿಗೆ ಬಹಳ ಸಂತುಷ್ಟನಾದ ಶ್ರೀಹರಿಯು, ಉತ್ತಮನಾದ ಮಗನನ್ನು ಅನುಗ್ರಹಿಸಿದನು ಕಾಂತಿಯುತನಾದ ಮಗನನ್ನು ನೋಡಿ ಯಾವಾಗಲೂ ಸುಖವನ್ನು ಹೊಂದುತ್ತಿದ್ದರು.

**ವೇಂಕಟೇಶಪ್ರದತ್ತಂ ತಂ ವೀಣಾವೇಂಕಟನಾಯಕಂ।**
**ಸರ್ವವಿದ್ಯಾತಿಶಾಯಿನಃಸ್ಮಾಹುರ್ಗ್ರಾಮೇ ಸ್ಥಿತಾ ನರಾಃ ॥೨೧॥**

ಭುವನಗಿರಿಯಲ್ಲಿರುವ ಎಲ್ಲ ವಿದ್ಯೆಗಳಲ್ಲಿ ನಿಪುಣರಾದ ಜನರು, ಶ್ರೀವೇಂಕಟೇಶನ ವರದಿಂದ ಹುಟ್ಟಿದ ಆ ಕೂಸನ್ನು **ವೀಣಾವೇಂಕಟ** ಎಂಬ ಹೆಸರಿನಿಂದ ಕರೆದರು.

**ತತಸ್ತಿಮ್ಮಣ್ಣಭಟ್ಟಃಸ್ವಾಂ ಕನ್ಯಾಂ ದೃಷ್ಟ್ವಾಷ್ಟವಾರ್ಷಿಕೀಂ।**
**ಕಾಂಚೀದೇಶೇ ಸಂಚರನ್ ಸ ವರಂ ಪುತ್ರ್ಯಾಃಸಮಾವೃಣೋತ್ ॥೨೨॥**

ಅನಂತರದಲ್ಲಿ ಆ ತಿಮ್ಮಣ್ಣಭಟ್ಟರು ಎಂಟುವರ್ಷದವಳಾದ ತಮ್ಮ ಮಗ

ಳನ್ನು ನೋಡಿ (ಲಗ್ನಕ್ಕೆ ಯೋಗ್ಯವಯಸ್ಸು ಎಂದು ತಿಳಿದು) ಕಾಂಚೀದೇಶದಲ್ಲಿ ಸಂಚರಿಸುತ್ತಾ ಮಗಳಿಗೆ ವರನನ್ನು ಹುಡುಕಿದರು.

ಅ. ವಿ. :—ತಿಮ್ಮಣ್ಣಭಟ್ಟರು ವರನನ್ನು ಹುಡುಕುತ್ತಿದ್ದಾಗ, ಮಧುರಾ ಪಟ್ಟಣದಲ್ಲಿರುವ ಲಕ್ಷ್ಮೀನೃಸಿಂಹಾಚಾರ್ಯರ ತಂದೆಯಾದ **ಫಣಿಶಾಯಿ** ಎಂಬುವರು ಮಗನಿಗೆ ಉಪನಯನವನ್ನು ಮಾಡಿ ವಿವಾಹಕ್ಕೆ ಯುಕ್ತವಾದ ವಯಸ್ಸು ಬಂದಾಗ ಯೋಗ್ಯಕನ್ಯೆಯನ್ನು ಹುಡುಕುತ್ತಾ ತಿಮ್ಮಣ್ಣಭಟ್ಟರಲ್ಲಿ ಬಂದರು.

**ತತೋ ವೀಣಾತಿಮ್ಮಣಾರ್ಯೋ ವೇಂಕಟಸ್ಯ ಚ ಧೀಮತಃ ।**
**ಚೌಲಂ ಚಕಾರ ತತ್ರೈವ ತೃತೀಯೇ ವತ್ಸರೇ ಮುದಾ ॥೨೩॥**

ಅದೇ ಸಮಯದಲ್ಲಿ ವೀಣಾತಿಮ್ಮಣ್ಣಭಟ್ಟರು ಕುಶಲಿಯಾದ ವೆಂಕಣ್ಣನಿಗೆ ಮೂರನೆಯ ವರ್ಷದಲ್ಲಿ ಭುವನಗಿರಿಯಲ್ಲಿಯೇ ಹರ್ಷದಿಂದ ಚೌಲವನ್ನು (ಜಾವಳವನ್ನು) ಮಾಡಿದರು.

**ವೇಂಕಟಾಂಬಾಂ ಸ್ವತನಯಾಂ ಲಕ್ಷ್ಮೀನೃಸಿಂಹಧೀಮತೇ ।**
**ಮಧುರಾಯಾಂ ವಾಸಕರ್ತ್ರೇ ದತ್ವಾ ತಸ್ಮೈ ತುತೋಷ ಸಃ ॥೨೪॥**

ಮಧುರಾಪಟ್ಟಣದಲ್ಲಿ ವಾಸಿಸಿದ, ಪ್ರಸಿದ್ಧರಾದ ಪಂಡಿತರಾದ ಆ **ಲಕ್ಷ್ಮೀನರಸಿಂಹಾಚಾರ್ಯರಿಗೆ** ತಿಮ್ಮಣ್ಣಭಟ್ಟರು ತಮ್ಮ ಮಗಳಾದ **ವೇಂಕಟಾಂಬೆ**ಯನ್ನು ಕೊಟ್ಟು (ವಿವಾಹ ಮಾಡಿ) ಸಂತೋಷಪಟ್ಟರು.

**ಸದಾರಸ್ತಿಮ್ಮಣಾಚಾರ್ಯೋ ಬಂಧೂನಾಹ್ವಾಯಯಂಸ್ತದಾ ।**
**ಕನ್ಯಾವಿವಾಹೇ ಸ್ವಂ ಪುತ್ರಂ ಜ್ಯೇಷ್ಠಂ ಚೋಪನಿನಾಯ ಸಃ ॥೨೫॥**

ಹೆಂಡತಿಯಿಂದ ಕೂಡಿದ ತಿಮ್ಮಣಾರ್ಯರು ಬಂಧುಗಳನ್ನು ಕರೆಯಿಸಿ ಮಗಳ ವಿವಾಹದ ಸಮಯದಲ್ಲಿಯೇ ಹಿರಿಯ ಮಗನಾದ ಗುರುರಾಜನಿಗೆ ಉಪನಯನವನ್ನು ಮಾಡಿದರು.

**ವಿವಾಹಂ ಯೋಗ್ಯಕಾಲೇ ಸ ಚಕ್ರೇ ಜ್ಯೇಷ್ಠಸ್ಯ ಪಂಡಿತಃ ।**
**ಗುರುರಾಜಸ್ಯ ಹಸ್ತೇ ತಂ ವೇಂಕಟಂ ಚ ಸಮಾರ್ಪಯತ್ ॥೨೬॥**

ಆ ಪಂಡಿತರಾದ ತಿಮ್ಮಣ್ಣ ಭಟ್ಟರು ಹಿರಿಯಮಗನಾದ ಗುರುರಾಜನಿಗೆ ಲಗ್ನಕ್ಕೆ ಯೋಗ್ಯವಾದ ಕಾಲದಲ್ಲಿ ವಿವಾಹವನ್ನು ಮಾಡಿದರು. ಮತ್ತು (ತಾವು ವೃದ್ಧರಾದ ಪ್ರಯುಕ್ತ) ವೆಂಕಣ್ಣನನ್ನು (ಕಿರಿಯ ಮಗನನ್ನು) ಗುರುರಾಜಾ ಚಾರ್ಯರ ಕೈಯಲ್ಲಿ ಒಪ್ಪಿಸಿದರು.

**ಅನುಜಸ್ಯಾಷ್ಟಮೇ ವರ್ಷೇ ಮೌಂಜೀಬಂಧನಮಾಚರತ್ ।**
**ಬ್ರಾಹ್ಮಣೈರ್ಬಹುಭಿರ್ಯುಕ್ತೋ ಗುರುರಾಜಃಪ್ರಹೃಷ್ಟಧೀಃ ॥೨೭॥**

ಸಂತುಷ್ಟಮನಸ್ಕರಾದ ಗುರುರಾಜಾಚಾರ್ಯರು (ತಿಮ್ಮಣ್ಣ ಭಟ್ಟರು ಸ್ವರ್ಗಸ್ಥರಾದ ಪ್ರಯುಕ್ತ) ಬಹುಮಂದಿ ಬ್ರಾಹ್ಮಣರಿಂದ ಕೂಡಿಕೊಂಡು ತಮ್ಮನಿಗೆ ಎಂಟನೆಯ ವಯಸ್ಸಿನಲ್ಲಿ ಉಪನಯನವನ್ನು ಮಾಡಿದರು.

**ಪಿತೃಚಿಂತಾಸುಮಗ್ನತ್ವಾಜ್ಜ್ಯೇಷ್ಠಪುತ್ರೋಽಪಿ ಪಂಡಿತಃ ।**
**ಲಕ್ಷ್ಮೀನೃಸಿಂಹನಿಕಟೇ ವಿದ್ಯಾರ್ಥಂ ಸಮಯೋಜಯತ್ ॥೨೮॥**

ಹಿರಿಯಮಕ್ಕಳಾದ ಗುರುರಾಜಾಚಾರ್ಯರು ತಾವು ಪಂಡಿತರಾದಾಗ್ಯೂ ತಂದೆಯ ಅಗಲುವಿಕೆಯ ಚಿಂತೆಯಲ್ಲಿ ಮುಳುಗಿದವರಾದ ಪ್ರಯುಕ್ತ ವೆಂಕಣ್ಣನನ್ನು ಭಾವಂದಿರಾದ ಲಕ್ಷ್ಮೀನರಸಿಂಹಾಚಾರ್ಯರ ಹತ್ತಿರ ವಿದ್ಯಾರ್ಜನೆಗೆ ಯೋಜಿಸಿದರು (ಬಿಟ್ಟರು.)

**ಶುಕ್ಲಪಕ್ಷೇ ಚಂದ್ರ ಇವ ವವೃಧೇ ಕಲಯಾ ಸುಧೀಃ ।**
**ಸರ್ವವಿದ್ಯಾಸು ಬಾಲ್ಯೇ ಸ ಪಾಂಡಿತ್ಯಂ ಸಮುಲಬ್ಧವಾನ್ ॥೨೯॥**

ಕುಶಲಿಯಾದ ವೆಂಕಣ್ಣನು ಶುಕ್ಲಪಕ್ಷದಲ್ಲಿ ಚಂದ್ರನು ಕಲೆಯಿಂದ ಹೇಗೆ ಅಭಿವೃದ್ಧಿಯನ್ನು ಹೊಂದಬೇಕೋ ಅದರಂತೆ ಬೆಳೆದನು. ವೆಂಕಣ್ಣನು ಬಾಲ್ಯದಲ್ಲಿಯೇ ಎಲ್ಲ ವಿದ್ಯೆಗಳಲ್ಲಿ ಪಾಂಡಿತ್ಯವನ್ನು ಚೆನ್ನಾಗಿ ಹೊಂದಿದನು.

**ಜ್ಞಾತ್ವಾ ಲಗ್ನವಯಸ್ಕಂ ಚ ತಸ್ಮೈ ಕನ್ಯಾಮಯೋಽಜಯತ್ ।**
**ಸರಸ್ವತೀತಿ ನಾಮ್ನೀಂ ಹಿ ಗುರುರಾಜಸ್ತದಾ ಮುದಾ ॥೩೦॥**

ಗುರುರಾಜಾಚಾರ್ಯರು ವೆಂಕಣ್ಣನಿಗೆ ಲಗ್ನಕ್ಕೆ ಯೋಗ್ಯವಾದ ವಯ

ಸ್ಸುಳ್ಳವನೆಂದು ತಿಳಿದು, ಆಗ ಸಂತೋಷದಿಂದ (ಅಗ್ರಹಾರದಲ್ಲಿರುವ) **ಸರಸ್ವತೀ** ಎಂದು ಹೆಸರುಳ್ಳ ಕನ್ಯೆಯನ್ನು ನಿಶ್ಚಯಿಸಿದರು.

**ಸುನಕ್ಷತ್ರೇ ಶುಭದಿನೇ ಸುಪಾಣಿಗ್ರಹಣಂ ಕೃತಂ ।**
**ವೀಣಾ ವೇಂಕಟಭಟ್ಟೇನ ದೃಷ್ಟ್ವಾ ತತ್ತು ತುತೋಷ ಸಃ ॥೩೦॥**

ಶುಭನಕ್ಷತ್ರಯುಕ್ತಶುಭದಿನದಂದು ವೀಣಾವೆಂಕಣ್ಣಭಟ್ಟರಿಂದ ಪಾಣಿಗ್ರಹಣವು ಮಾಡಲ್ಪಟ್ಟಿತು (ವೆಂಕಣ್ಣನಿಗೂ ಸರಸ್ವತೀಬಾಯಿಯವರಿಗೂ ವಿವಾಹವಾಯಿತು). ಗುರುರಾಜಾಚಾರ್ಯರು ಮದುವೆಯ ಸಂಭ್ರಮವನ್ನು ನೋಡಿ ಸಂತೋಷಪಟ್ಟರು.

**ತತಃಶ್ರೀವೇಂಕಟಾಚಾರ್ಯಃಕುಂಭಘೋಣಪುರಂ ಗತಃ ।**
**ತತ್ರ ಶ್ರೀಸ್ವಾಮಿನಂ ಶ್ರೇಷ್ಠಂ ಶ್ರೀಸುಧೀಂದ್ರಂ ನನಾಮ ಸಃ ॥೩೧॥**

ಅನಂತರದಲ್ಲಿ ಶ್ರೀ ವೇಂಕಟಾಚಾರ್ಯರು ಕುಂಭಘೋಣಪಟ್ಟಣಕ್ಕೆ ಹೋದರು. ಅಲ್ಲಿ (ವಾಸವಾಗಿದ್ದ) ಗುರುಗಳೂ ಪೂಜ್ಯರೂ ಆದ ಶ್ರೀಸುಧೀಂದ್ರತೀರ್ಥರಿಗೆ ನಮಸ್ಕರಿಸಿದರು.

**ಶ್ರೀಸುಧೀಂದ್ರಕೃತಪ್ರಶ್ನಃಸ್ವನಾಮಾದ್ಯವದತ್ತತಮ್ ।**
**ಪಠನಾರ್ಥಂ ಮಯಾ ಪ್ರಾಪ್ತಂ ಭವತ್ಚರಣಪಂಕಜಮ್ ॥೩೨॥**

ಶ್ರೀಸುಧೀಂದ್ರರಿಂದ ಮಾಡಲ್ಪಟ್ಟ ಪ್ರಶ್ನೆವುಳ್ಳ ಶ್ರೀವೇಂಕಟಾಚಾರ್ಯರು, ತಮ್ಮ ಹೆಸರು, ವಿದ್ಯಾಭ್ಯಾಸ, ಮೊದಲಾದದ್ದನ್ನು ಶ್ರೀಸುಧೀಂದ್ರತೀರ್ಥರಿಗೆ ಹೇಳಿದರು. ಮತ್ತು ನನ್ನಿಂದ ಅಭ್ಯಾಸಕ್ಕಾಗಿ ತಮ್ಮ ಪಾದಕಮಲವು ಹೊಂದಲ್ಪಟ್ಟಿತು (ವಿಶಿಷ್ಟವ್ಯಾಸಂಗಕ್ಕಾಗಿ ತಮ್ಮಲ್ಲಿಗೆ ಬಂದಿರುವೆ ಎಂದು ಹೇಳಿದರು).

**ಉಕ್ತವಂತಂ ವೇಂಕಟಾರ್ಯಂ ಸುಧೀಂದ್ರಸ್ತ್ವಾವದನ್ ಮುದಾ ।**
**ತಥೈವ ಭವತು ಛಾತ್ರ ಸರ್ವದಾ ತ್ವಂ ವಸೇತಿ ಚ ॥೩೩॥**

ಈ ರೀತಿ ಹೇಳಿದ ವೇಂಕಟಾರ್ಯರನ್ನು ಕುರಿತು ಶ್ರೀಸುಧೀಂದ್ರತೀರ್ಥರು ಸಂತೋಷದಿಂದ ಹಾಗೇ ಆಗಲಿ, ಶಿಷ್ಯನೇ ! ಯಾವಾಗಲೂ ನೀನು ಇಲ್ಲಿಯೇ ವಾಸಮಾಡು ಎಂದು ಹೇಳಿದರು.

**ಪ್ರಾತಃಕಾಲೇ ತ್ವಧೀತಸ್ಯ ರಾತ್ರೌ ವ್ಯಾಖ್ಯಾಂ ಲಿಲೇಖ ಸಃ ।**
**ಗ್ರಂಥಸ್ಯ ವೇಂಕಟಾಚಾರ್ಯಃಪ್ರತ್ಯಹಂ ಚೈವಮೇವ ಹಿ ॥೩೫॥**

ಪ್ರಸಿದ್ಧರಾದ ವೇಂಕಟಾಚಾರ್ಯರು ಪ್ರಾತಃಕಾಲದಲ್ಲಿ ಅಧ್ಯಯನ ಮಾಡಿದ ಗ್ರಂಥಕ್ಕೆ ರಾತ್ರಿಯಲ್ಲಿ ವ್ಯಾಖ್ಯಾನವನ್ನು (ಅರ್ಥವಿವರಣೆಯನ್ನು) ಬರಯುತ್ತಿದ್ದರು. ಪ್ರತಿದಿವಸದಲ್ಲಿಯೂ ಹೀಗಿಯೇ ಮಾಡುತ್ತಿದ್ದರು.

**ಪರದೇಶಾದಾಗತತ್ವಾತ್ ಶ್ರೇಷ್ಠತ್ವಾಚ್ಚ ಜನಾಃಸದಾ ।**
**ಅಸೂಯಯಾ ವೇಂಕಟಾರ್ಯೇ ಶ್ರೀಸುಧೀಂದ್ರಂ ತದೋಚಿರೇ ॥೩೬॥**

ಮಠದಲ್ಲಿರುವ ಜನರು, ಬೇರೆ ಊರಿನಿಂದ ಬಂದವರಾದ್ದರಿಂದಲೂ ಉತ್ತಮತ್ವ ಉಳ್ಳವರಾದ್ದರಿಂದಲೂ ಯಾವಾಗಲೂ ಅಸೂಯೆಯಿಂದ ವೇಂಕಟಾಚಾರ್ಯರ ವಿಷಯದಲ್ಲಿ ಶ್ರೀಸುಧೀಂದ್ರರನ್ನು ಕುರಿತು ಮುಂದಿನಂತೆ ವಿಜ್ಞಾಪಿಸಿದರು.

**ಸದ್ಗುರೋ ಶ್ರೀಸುಧೀಂದ್ರಾರ್ಯ ವೇಂಕಟಾರ್ಯಸ್ಯ ಧೀಮತಃ ।**
**ಶೃಣು ವೃತ್ತಂ ಯತಿಶ್ರೇಷ್ಠ ತ್ವಂ ಪರೀಕ್ಷಾಂ ತತಃಕುರು ॥೩೭॥**

ಸದ್ಗುರುಗಳಾದ ಯತಿಶ್ರೇಷ್ಠರಾದ ಶ್ರೀಸುಧೀಂದ್ರತೀರ್ಥರೇ ! ಬುದ್ಧಿವಂತನಾದ ವೇಂಕಟಾರ್ಯನ ವೃತ್ತಾಂತವನ್ನು ಕೇಳಿ ; ಆಮೇಲೆ ನೀವು ಪರೀಕ್ಷೆಯನ್ನು ಮಾಡಿರಿ.

ಅ.ವಿ. :—ಬುದ್ಧಿವಂತನಾದ ವೇಂಕಟಾರ್ಯ ಎಂದು ಹೇಳಿದ ಜನರ ಅಭಿಪ್ರಾಯ :—ಅವನು ಬುದ್ಧಿವಂತನಲ್ಲ, ನೀವು ಅವನು ಜಾಣ ಎಂದು ತಿಳಿದಿದ್ದೀರಿ, ಎನ್ನುವದನ್ನು ಚುಚ್ಚಿ ಆಡಿದ ಮಾತು, ಏಕೆಂದರೆ ಜನರ ಮುಂದಿನ ಮಾತಿನಿಂದ ಅದು ತಿಳಿಯುತ್ತದೆ.

**ರಾತ್ರೌ ನಿದ್ರಾತಿ ನಾಧೀತೇ ಕ್ರೀಡತೇ ಚ ದಿವೇತಿಹಿ ।**
**ಜನೋಕ್ತೇತಿ ಶ್ರುತಾ ವಾರ್ತಾ ಗುರೋಽಸ್ಮಾಭಿರ್ನಿವೇದಿತಾ ॥೩೮॥**

ರಾತ್ರಿಯಲ್ಲಿ ನಿದ್ರಿಸುತ್ತಾನೆ, ಹಗಲು ಆಟವಾಡುತ್ತಾನೆ, ಓದುವದಿಲ್ಲ, ಹೀಗೆಂದು ಜನರಿಂದ ಹೇಳಲ್ಪಟ್ಟ ಸಮಾಚಾರವು ನಮ್ಮಿಂದ ಕೇಳಲ್ಪಟ್ಟಿತು. ಗುರುಗಳೇ (ಅದನ್ನು) ತಮ್ಮ ಮುಂದೆ ಅರಿಕೆ ಮಾಡಲ್ಪಟ್ಟಿತು.

**ಏವಮುಕ್ತಶ್ಚಾತ್ರಸಂಘೈಃಸುಧೀಂದ್ರೋ ಗುರುರಬ್ರವೀತ್ ।**
**ವೇಂಕಟಾರ್ಯಪರೀಕ್ಷಾ ತು ಮಯ್ಯೈವ ಕ್ರಿಯತೇತ್ವಿತಿ ॥೩೯॥**

ಗುರುಗಳಾದ ಶ್ರೀಸುಧೀಂದ್ರತೀರ್ಥರು, ಹೀಗೆ ಶಿಷ್ಯರ ಸಮೂಹದಿಂದ ಹೇಳಲ್ಪಟ್ಟದ್ದನ್ನು ಕೇಳಿ, ವೆಂಕಣ್ಣನ ಪರೀಕ್ಷೆಯಾದರೋ ನನ್ನಿಂದಲೇ ಮಾಡಲ್ಪಡುತ್ತದೆ ಎಂದು ಹೇಳಿದರು.

**ಏಕಸ್ಮಿನ್ ದಿವಸೇ ಪಾಠೇ ಸಂಶಯಂ ಪ್ರಾಪ್ತವಾನಿವ ।**
**ಪಾಠಾದ್ವಿರಮ್ಯತಾಂ ಶಿಷ್ಯೈಃಶ್ವ ಏವ ಪ್ರೋಚ್ಯತೇ ಮಯಾ ॥೪೦॥**

**ಇತ್ಯೂಚೇ ಶಿಷ್ಯಸಂಘಾನ್ ಸ ಸುಧೀಂದ್ರೋ ಗುರುವರ್ಯಕಃ ।**
**ತಸ್ಮಿನ್ ದಿನೇ ತ್ವರ್ಧರಾತ್ರೌ ಪರೀಕ್ಷಾರ್ಥಂ ಗತೋ ಗುರುಃ ॥೪೧॥**

(ಕೆಲವುದಿನಗಳು ಕಳೆದಮೇಲೆ) ಒಂದಾನೊಂದುದಿನ ಶ್ರೀಮನ್ನ್ಯಾಯಸುಧಾಪಾಠದ ಸಮಯದಲ್ಲಿ ಸಂಶಯಬಂದಂತೆ ನಟಿಸಿ (ಸಂಶಯವಿಲ್ಲದಿದ್ದರೂ ಶಿಷ್ಯರ ಅಭ್ಯಾಸವನ್ನು ಪರೀಕ್ಷಿಸಲು ಹೀಗೆ ಮಾಡಿದರು) ಶಿಷ್ಯರುಗಳು ಪಾಠದಿಂದ ವಿರಮಿಸಲ್ಪಡಲಿ (ಶಿಷ್ಯರೇ ! ಇಂದಿಗೆ ಪಾಠನಿಲ್ಲಿಸಿ) ನಾಳೆ ನನ್ನಿಂದ ಹೇಳಲ್ಪಡುತ್ತದೆ.

ಹೀಗೆಂದು ಶಿಷ್ಯಸಮೂಹವನ್ನು ಕುರಿತು ಪ್ರಸಿದ್ಧರಾದ ಗುರುವರ್ಯರಾದ ಶ್ರೀಸುಧೀಂದ್ರರು ಹೇಳಿದರು. ಅಂದಿನ ದಿನವೇ ಅರ್ಧರಾತ್ರಿಯಲ್ಲಿ ಶ್ರೀಗುರುಗಳು ಶಿಷ್ಯರುಗಳ ಮಾತನ್ನು (ಶಿಷ್ಯರನ್ನು) ಪರೀಕ್ಷಿಸಲು ಹೊರಟರು.

**ವೇಂಕಟಾರ್ಯಂ ವಿನಾ ಶಿಷ್ಯಾಃಸುಷ್ವಪುಃಪುಸ್ತಕಂ ವಿನಾ ।**
**ತದೈವ ಶ್ರೀವೇಂಕಟಾರ್ಯಃಪ್ರಾಜ್ಞಸ್ಯಾಲಿಂಗನಂ ಗತಃ ॥೪೨॥**

ವೇಂಕಟಾರ್ಯನನ್ನು ಬಿಟ್ಟು ಎಲ್ಲ ಶಿಷ್ಯರೂ ಪುಸ್ತಕವೂ ಇಲ್ಲದೇ ಮಲಗಿದ್ದರು. ಶ್ರೀವೇಂಕಟಾರ್ಯರಾದರೋ ಆಗತಾನೇ ಪ್ರಾಜ್ಞನಾಮಕಪರಮಾತ್ಮನ ಆಲಿಂಗನವನ್ನು ಹೊಂದಿದ್ದರು (ಆಗಲೇ ನಿದ್ರೆಮಾಡಿದ್ದರು).

**ಅ.ವಿ.** :—ಆಗತಾನೇ ವೇಂಕಟಾರ್ಯರು ಮಲಗಿದ್ದರು ಎಂದು ಶ್ರೀಸುಧೀಂದ್ರರು ಹೇಗೆ ಗುರುತಿಸಿದರು ಎಂದರೆ, ದಾರಿದ್ರ್ಯಾವಸ್ಥೆಯಲ್ಲಿರುವ ಶ್ರೀವೆಂಕಣ್ಣನವರಿಗೆ ಎಣ್ಣೆಯ ದೀಪವನ್ನು ಹಚ್ಚಿ ಅದರ ಬೆಳಕಿನಲ್ಲಿ ಬರೆಯು

ವೆದು ಸಾಧ್ಯವಿದ್ದಿಲ್ಲ, ಕಾರಣ ಒಣಗಿದ ಎಲೆಗಳನ್ನು ಶೇಖರಿಸಿ ಒಂದೊಂದು ಎಲೆಯನ್ನು ಹಚ್ಚುವೆದು ಅದರ ಪ್ರಕಾಶದಲ್ಲಿ ಬರೆಯುವೆದು, ಅದು ಆರುವದರೊಳಗಾಗಿ ಮತ್ತೊಂದು ಹಚ್ಚುವೆದು ಹೀಗೆ ಮಾಡಿ ಬರೆಯುತ್ತಿದ್ದರು. ಶ್ರೀಸುಧೀಂದ್ರತೀರ್ಥರು ಬಂದ ಕಾಲದಲ್ಲಿ ಆ ಎಲೆಗಳ ಬೆಂಕಿಯು ಇನ್ನೂ ಆರಿದ್ದಿಲ್ಲ. ಆದುದರಿಂದ ಈಗಲೇ ಮಲಗಿದ್ದಾರೆ ಎಂದು ನಿಶ್ಚಯಿಸಿದರು.

**ತತ್ರಾಗತ್ಯ ಗುರುಃಶ್ರೀಮಾನ್ ಪುಸ್ತಕಂ ದೃಷ್ಟವಾಂಸ್ತದಾ ।**
**ಸ್ವಸಂದಿಗ್ಧಸ್ಯ ವಾಕ್ಯಸ್ಯ ಟಿಪ್ಪಣೀಂ ತತ್ರ ದೃಷ್ಟವಾನ್ ॥೩೩॥**

ಪೂಜ್ಯಶ್ರೀಗುರುಗಳು ವೆಂಕಣ್ಣನ ಸನಿಹಕ್ಕೆ ಬಂದು (ವೆಂಕಣ್ಣನ ತಲೆಯ ಹತ್ತಿರವಿರುವ) ಪುಸ್ತಕವನ್ನು ನೋಡಿದವರಾಗಿ, ಆಗ (ಆ ಪುಸ್ತಕವನ್ನು ತೆಗೆದುಕೊಂಡು) ತಮಗೆ ಸಂದಿಗ್ಧವಾದ ವಾಕ್ಯದ ವಿವರಣೆಯನ್ನು ಆ ಪುಸ್ತಕದಲ್ಲಿ ನೋಡುವವರು (ಆದರು).

**ವೇಂಕಟಾರ್ಯಕೃತಾಂ ಜ್ಞಾತ್ವಾ ತ್ವಗೃಹ್ಣಾತ್ಪುಸ್ತಕಂ ಮುದಾ ।**
**ತತ್ರೈವ ಶುಷ್ಕಪತ್ರಾಣಿ ಪ್ರಕಾಶೈಕಫಲಾನಿ ವೈ ॥೩೪॥**

**ಗುರುಣಾ ತದ್ಭಸ್ಮಸಂಘಸ್ತಥಾ ಚ ಸಮದೃಶ್ಯತ ।**
**ತಥೈವ ಛಿದ್ರವಸನಂ ದಧತಂ ವೇಂಕಟಾರ್ಯಕಂ ।**
**ಆಚ್ಛಾದನೇನ ರಹಿತಂ ದೃಷ್ಟ್ವಾ ವಿಸ್ಮಯಮಾಯಯೌ ॥೩೫॥**

ವೇಂಕಟಾರ್ಯನಿಂದ ಮಾಡಲ್ಪಟ್ಟದ್ದು ಎಂದು ತಿಳಿದು, ಸಂತೋಷದಿಂದ ಆ ಪುಸ್ತಕವನ್ನು ತೆಗೆದುಕೊಂಡು, ಪ್ರಕಾಶಿಸಲು ಮಾತ್ರ ಪ್ರಯೋಜನವಾಗಿ ಉಳ್ಳ ಎಲೆಗಳನ್ನು,

ಹಾಗೂ (ಬಹುವೇಳೆಯಿಂದ) ಸುಟ್ಟು ಎಲೆಗಳ ಬೂದಿಯ ರಾಶಿಯನ್ನು ಮತ್ತು ಹರಕುವಸ್ತ್ರನನ್ನುಟ್ಟ, ಹೊದ್ದುಕೊಳ್ಳುವ ವಸ್ತ್ರವಿಲ್ಲದ ವೇಂಕಟಾರ್ಯನನ್ನು ನೋಡಿ ಆಶ್ಚರ್ಯಗೊಂಡರು. ಇಂತಹ ದಾರಿದ್ರ್ಯಾವಸ್ಥೆಯಲ್ಲಿದ್ದರೂ ನಮ್ಮಲ್ಲಿ ಹೇಳದೇ ಆಸಕ್ತಿಯಿಂದ ಕಷ್ಟಪಟ್ಟು ಅಭ್ಯಾಸಮಾಡುತ್ತಿರುವನಲ್ಲ ಎಂದು ಆಶ್ಚರ್ಯಗೊಂಡರು.

ಅ.ವಿ. : –ಶ್ರೀವೆಂಕಣ್ಣರು ಪ್ರತಿದಿನವೂ ಶ್ರೀಸುಧೀಂದ್ರತೀರ್ಥರಿಂದ

ಹೇಳಲ್ಪಟ್ಟ ಪಾಠದ ಸಾರಾಂಶವನ್ನು ಇಂತಿಷ್ಟು ಪತ್ರಗಳನ್ನು ಬರೆಯತಕ್ಕದ್ದು ಎಂದು ವ್ಯವಸ್ಥೆ ಮಾಡಿಕೊಂಡಿದ್ದರು. ಅಂದು ಶ್ರೀಸುಧೀಂದ್ರತೀರ್ಥರು ಮಧ್ಯ ದಲ್ಲಿಯೇ ಪಾಠವನ್ನು ನಿಲ್ಲಿಸಿದರೂ ಪ್ರತಿಭಾಶಾಲಿಗಳಾದ ವೇಂಕಟಾಚಾರ್ಯರು ಅದನ್ನೂ ಸೇರಿಸಿಕೊಂಡು ತಮ್ಮ ಸಂಕಲ್ಪಾನುಸಾರವಾಗಿ ಅಷ್ಟು ಪತ್ರಗಳನ್ನು ಬರೆದಿದ್ದರು.

**ದಯಾಲುಃಶ್ರೀಸುಧೀಂದ್ರಾರ್ಯಃಸರ್ವಂ ದೃಷ್ಟ್ವಾ ತುತೋಷ ಸಃ ।**
**ಸ್ವಾಚ್ಛಾದಿತಂ ಚೋರ್ಣವಸ್ತ್ರಂ ಸುಪ್ತೇ ಶಿಷ್ಯೇ**
**ಮುದಾಸ್ತೃಣೋತ್ ॥೪೬॥**

ದಯಾಲುಗಳಾದ ಆ ಶ್ರೀಸುಧೀಂದ್ರಾರ್ಯರು, ವೆಂಕಣ್ಣನ ವಿದ್ಯಾಭ್ಯಾಸದ ಆಸಕ್ತಿ, ಸಹನಶೀಲತೆ, ವಿನಯ ಇವೆಲ್ಲವನ್ನು ನೋಡಿ ಸಂತೋಷಪಟ್ಟರು, ಹಾಗೂ ತಾವು ಹೊದ್ದಿರುವ ಉಣ್ಣೆಯ ವಸ್ತ್ರವನ್ನು (ಶಹಲನ್ನು) ಗಾಢನಿದ್ರಾ ವಸ್ಥೆಯಲ್ಲಿರುವ ಶಿಷ್ಯ ವೆಂಕಣ್ಣನಿಗೆ ಹೊದಿಸಿದರು.

**ತತಃಶ್ರೀವೇಂಕಟಾಚಾರ್ಯಃಪ್ರಾತರುತ್ಥಾಯ ಪುಸ್ತಕಂ ।**
**ಅದೃಷ್ಟ್ವಾ ಖಿನ್ನಚಿತ್ತಃಸ್ವ ಕೇನ ನೀತಮಿತೀರಯನ್ ॥೪೭॥**

**ಸ್ವೋಪರಿಷ್ಟಂ ಚೋರ್ಣವಸ್ತ್ರಂ ದೃಷ್ಟ್ವಾ ಭೀತಮನಾಸ್ತ್ವಭೂತ್ ।**
**ಏತತ್ಸರ್ವಂ ಛಾತ್ರಸಂಘೈಃಕೃತಮಿತ್ಯವಧಾರಿತಮ್ ॥೪೮॥**

ಅನಂತರ ಆ ವೇಂಕಟಾಚಾರ್ಯರು ಬ್ರಾಹ್ಮಮುಹೂರ್ತದಲ್ಲಿ ಎದ್ದು ಪುಸ್ತಕವನ್ನೂ ಕಾಣದೇ ಖಿನ್ನಮನಸ್ಕರಾಗಿ ಯಾರಿಂದ ಒಯ್ಯಲ್ಪಟ್ಟಿತು ಎಂದು ಹೇಳುತ್ತಿರುವವರಾಗಿ

ತಮ್ಮ ಮೈಮೇಲಿರುವ ಗುರುಗಳ ಶಹಲನ್ನು ನೋಡಿ ಭಯ ಉಳ್ಳವ ರಾದರು. ನನ್ನ ಪುಸ್ತಕ ಕಣ್ಮರೆಯಾಗುವದು, ಗುರುಗಳ ಶಹಲು ನನ್ನ ಮೈಮೇಲೆ ಬರುವದು ಇದು ಎಲ್ಲವೂ ಸಹಪಾಠಿಗಳಾದ ವಿದ್ಯಾರ್ಥಿಗಳ ಸಮೂಹದಿಂದ ಮಾಡಲ್ಪಟ್ಟಿದ್ದು ಎಂದು ನಿರ್ಧರಿಸಲ್ಪಟ್ಟಿತು.

**ಸ್ನಾನಾದಿಕಂ ಸಮಾಪ್ಯಾಥ ಗತ್ವಾ ನತ್ವಾ ಮಠಂ ಗುರುಂ ।**
**ಅವದತ್ ಶ್ರೀಸುಧೀಂದ್ರಾರ್ಯಂ ಭಯವಿಹ್ವಲಮಾನಸಃ ॥೪೯॥**

ಅನಂತರದಲ್ಲಿ (ಸ್ನಾನವಿಲ್ಲದೇ ಗುರುಗಳ ಸನ್ನಿಧಿಗೆ ಹೋಗಕೂಡದು ಎಂದು) ಸ್ನಾನ ಸಂಧ್ಯಾ ಅರ್ಚನೆಗಳನ್ನು ಮುಗಿಸಿಕೊಂಡು ಶ್ರೀವಿಜಯೀಂದ್ರ ತೀರ್ಥರ ಮಠಕ್ಕೆ ಹೋಗಿ ಶ್ರೀಸುಧೀಂದ್ರತೀರ್ಥರಿಗೆ ನಮಸ್ಕರಿಸಿ ಭಯವಿಹ್ವಲ ವಾದ ಮನಸ್ಸಿನಿಂದ, ವಿಜ್ಞಾಪಿಸಿದರು.

**ಅಸೂಯಯಾ ಛಾತ್ರಸಂಘೈಃ ಶ್ರೀಮತಾಮೂರ್ಣವಸ್ತ್ರಕಂ ।**
**ಮಮೋಪರಿ ಪಿಧಾಯ್ಯಾಥ ಹೃತಂ ಮೇ ಪುಸ್ತಕಂ ಗುರೋ ॥೩೦॥**

ಗುರುಗಳೇ ! ಶಿಷ್ಯರ ಸಮೂಹದಿಂದ, ತಮ್ಮ ಶಹಲನ್ನು ನನ್ನಮೇಲಿನ ಅಸೂಯೆಯಿಂದ ನನ್ನ ಮೇಲೆ ಹೊದಿಸಿ, ಆ ಮೇಲೆ ನನ್ನ ಪುಸ್ತಕವು ಕದಿಯಲ್ಪಟ್ಟಿತು.

**ಮಯಾಪರಾಧೋ ನ ಕೃತಃ ಪ್ರಭುಣಾ ಸುವಿಚಾರ್ಯತಾಂ ।**
**ಅಪರಾಧೀ ಚಾಹಮಿತಿ ಯದಿ ಸ್ಯಾಂ ದಂಡ್ಯತಾಂ ಪ್ರಭೋ ॥೩೧॥**

ಪ್ರಭೋ ನನ್ನಿಂದ ಅಪರಾಧವು ಮಾಡಲ್ಪಡಲಿಲ್ಲ, ಪ್ರಭುಗಳಿಂದ ಚೆನ್ನಾಗಿ ವಿಚಾರಿಸಲ್ಪಡಲಿ ನಾನು ಅಪರಾಧಿ ಎಂದು ಆದ ಪಕ್ಷದಲ್ಲಿ ಶಿಕ್ಷಿಸಲ್ಪಡಲಿ.

**ಇತ್ಯುಕ್ತ್ವಾ ವೇಂಕಟಾಚಾರ್ಯಶ್ಚೋರ್ಣವಸ್ತ್ರಂ ದದೌ ತದಾ ।**
**ಶ್ರೀಸುಧೀಂದ್ರೋ ವ್ರತೀಂದ್ರೋಽಸೌ ತಸ್ಮೈ ತದ್ದತ್ತವಾನ್ ಪುನಃ ॥೩೨॥**

ಹೀಗೆ ಹೇಳಿ ವೇಂಕಟಾಚಾರ್ಯರಾದರೋ ಶಹಲನ್ನು ಶ್ರೀಸುಧೀಂದ್ರ ತೀರ್ಥರಿಗೆ ಕೊಟ್ಟರು. ಆಗ ಆ ಶ್ರೀಸುಧೀಂದ್ರತೀರ್ಥರು ಮತ್ತೆ ಆ ವೇಂಕಟಾ ಚಾರ್ಯರಿಗೇ ಆ ಶಹಲನ್ನು ಕೊಟ್ಟರು.

**ಪಾಠಕಾಲೇ ಛಾತ್ರವರ್ಯ ! ವಿಚಾರಃ ಕ್ರಿಯತೇ ಮಯಾ ।**
**ಇತ್ಯುಕ್ತ್ವಾಸ್ಯ ಸಮಾಧಾನಂ ಕೃತ್ವಾ ಹೃಷ್ಟಮನಾ ಗುರುಃ ॥೩೩॥**

**ಸ್ನಾನಾಹ್ನೀಕಂ ಸಮಾಪ್ಯಾಥ ಪಾಠಂ ಪ್ರಾರಬ್ಧವಾನ್ ಮುದಾ ।**
**ತಸ್ಮಿನ್ ಕಾಲೇ ಛಾತ್ರಸಂಘಃ ಪ್ರಾಯಯೌ ಧೃತಪುಸ್ತಕಃ ॥೩೪॥**

ಶ್ರೀವೆಂಕಣ್ಣನವರ ವಾಕ್ಯದಿಂದ ಸಂತುಷ್ಟರಾದ ಶ್ರೀಸುಧೀಂದ್ರತೀರ್ಥರು, ಶಿಷ್ಯಶ್ರೇಷ್ಠನೇ ! ಪಾಠದ ಸಮಯದಲ್ಲಿ ನನ್ನಿಂದ ವಿಚಾರಿಸಲ್ಪಡುತ್ತದೆ, ಎಂದು ಹೇಳಿ ವೆಂಕಣ್ಣನಿಗೆ ಸಮಾಧಾನವನ್ನು ಮಾಡಿ,

ಆಮೇಲೆ ಸಂತಸದಿಂದ ಸ್ನಾನ ಆಹ್ನೀಕವನ್ನು ಮುಗಿಸಿ ಪಾಠವನ್ನು ಪ್ರಾರಂಭಿಸಿದರು. ಆ ಕಾಲದಲ್ಲಿ ಪುಸ್ತಕವನ್ನು ಹಿಡಿದ ಶಿಷ್ಯಸಮೂಹವು ಬಂದಿತು (ಪಾಠದ ವೇಳೆಯಲ್ಲಿ ಮಾತ್ರ ಪುಸ್ತಕವನ್ನು ಹಿಡಿಯುವ ಶಿಷ್ಯರು ಅಲ್ಲಿಗೆ ಬಂದರು).

**ಗುರುಃಪಾಠಂ ಸಮಾಪ್ಯಾಥ ರಾತ್ರಿವೃತ್ತಂ ನ್ಯವೇದಯನ್ ।**
**ವೇಂಕಟಾರ್ಯಕೃತಾಂ ವ್ಯಾಖ್ಯಾಂ ಛಾತ್ರಸಂಘಮದರ್ಶಯತ್ ॥೫೫॥**

ಅನಂತರದಲ್ಲಿ ಗುರುಗಳಾದ ಶ್ರೀಸುಧೀಂದ್ರತೀರ್ಥರು ಪಾಠವನ್ನು ಮುಗಿಸಿ ರಾತ್ರಿಯಲ್ಲಿ ತಾವು ಪರೀಕ್ಷಿಸಲು ಬಂದ ಸಮಾಚಾರವನ್ನು ಹೇಳಿದವರಾಗಿ ವೇಂಕಟಾರ್ಯರಿಂದ ಮಾಡಲ್ಪಟ್ಟ (ಬರೆಯಲ್ಪಟ್ಟ) ವ್ಯಾಖ್ಯಾನವನ್ನು ಶಿಷ್ಯ ಸಮೂಹಕ್ಕೆ ತೋರಿದರು.

**ಶ್ರುತ್ವಾ ದೃಷ್ಟ್ವಾ ತಚ್ಚ ತಾಂ ಚ ಪ್ರಾಭವಚ್ಚ ಗತಸ್ಮಯಃ ।**
**ವೇಂಕಟಾರ್ಯಂ ಛಾತ್ರಸಂಘಃಪ್ರಣನಾಮ ಮುಹುರ್ಮುಹುಃ ॥೫೬॥**

ಶ್ರೀಸುಧೀಂದ್ರರ ವಾಕ್ಯವನ್ನು ಕೇಳಿ, ಶ್ರೀವೇಂಕಟಾರ್ಯರಿಂದ ಬರೆಯಲ್ಪಟ್ಟ ವ್ಯಾಖ್ಯಾನವನ್ನು ನೋಡಿ, ವೆಂಕಣ್ಣನವರ ಪ್ರಭಾವನ್ನು (ಅರಿತು) ಆಶ್ಚರ್ಯಗೊಂಡ ವಿದ್ಯಾರ್ಥಿಸಂಘವು ವೇಂಕಟಾರ್ಯರಿಗೆ ಮತ್ತೆ ಮತ್ತೆ ನಮಸ್ಕರಿಸಿತು.

**ಮಾತ್ಸರ್ಯಂ ಕೃತಮಸ್ಮಾಭಿರ್ವೇಂಕಟಾರ್ಯ ದಯಾನಿಧೇ ।**
**ತತ್ಸರ್ವಂ ಕ್ಷಮ್ಯತಾಂ ಶ್ರೇಷ್ಠೇತ್ಯವದಚ್ಛಾತ್ರಸಂಚಯಃ ॥೫೭॥**

ದಯಾಮಯರಾದ ವೇಂಕಟಾರ್ಯರೇ! ನಮ್ಮಿಂದ ದ್ವೇಷವು ಮಾಡಲ್ಪಟ್ಟಿತು. ಪೂಜ್ಯರೇ! ಅದೆಲ್ಲವೂ ಕ್ಷಮಿಸಲ್ಪಡಲಿ, ಹೀಗೆಂದು ವಿದ್ಯಾರ್ಥಿಗಳ ಬೃಂದವು ಪ್ರಾರ್ಥಿಸಿತು.

**ದೃಷ್ಟ್ವಾ ವ್ಯಾಖ್ಯಾಂ ಗುರುಸ್ತುಷ್ಟೋ ವೇಂಕಟಾರ್ಯಂ ಜಗಾದ ಸಃ ।**
**ಸುಧಾವ್ಯಾಖ್ಯಾಪರಿಮಳಕರ್ತೃತ್ವಾತ್ತಸ್ಯ ನಾಮ ತೇ ॥೫೮॥**

ಆ ಶ್ರೀಸುಧೀಂದ್ರತೀರ್ಥರು ಟಿಪ್ಪಣಿಯನ್ನು ನೋಡಿ ಸಂತುಷ್ಟರಾಗಿ ಶ್ರೀಮನ್ನ್ಯಾಯಸುಧಾ ಎಂಬ ಗ್ರಂಥಕ್ಕೆ ವ್ಯಾಖ್ಯಾನವಾಗಿ **ಪರಿಮಳವನ್ನು**

ಮಾಡಿದ ಪ್ರಯುಕ್ತ, ಆ ಪರಿಮಳದ ಹೆಸರು ನಿನಗೆ ಎಂದು ವೇಂಕಟಾರ್ಯನಿಗೆ ಹೇಳಿದರು. (ಅಂದಿನಿಂದ ವೇಂಕಟಾರ್ಯರನ್ನು **ಪರಿಮಳಾಚಾರ್ಯ** ಎಂದು ಕರೆದರು.)

**ದತ್ವಾ ಪರಿಮಳಾಖ್ಯಾಂ ಸ ವೇಂಕಟಾರ್ಯಾಯ ಧೀಮತೇ ।**
**ಸಂಚಾರಾಯ ಸಶಿಷ್ಯೋಽಸೌ ಕುಂಭಘೋಣಪುರಾದ್ಗತಃ ॥೫೯॥**

ಪ್ರಸಿದ್ಧರಾದ ಶ್ರೀಸುಧೀಂದ್ರತೀರ್ಥರು ಕುಶಲಿಯಾದ ವೇಂಕಟಾರ್ಯನಿಗೆ **"ಪರಿಮಳಾಚಾರ್ಯ"** ಬಿರುದನ್ನು ಕೊಟ್ಟು, ಶಿಷ್ಯರಾದ ಪರಿಮಳಾಚಾರ್ಯ ರಿಂದ ಕೂಡಿಕೊಂಡು (ಭಕ್ತರುಗಳಿಗೆ ಹರಿಸರ್ವೋತ್ತಮತ್ವಜ್ಞಾನವನ್ನು ಉಪ ದೇಶಿಸಲು) ಕುಂಭಘೋಣಪಟ್ಟಣದಿಂದ ಸಂಚಾರಕ್ಕೆ ಹೊರಟರು.

**ಏಕಸ್ಮಿನ್ ದಿವಸೇ ಶ್ರೀಮಾನ್ ಮನ್ನಾರೋಚ್ಚಾಲಯಂ ಪ್ರತಿ ।**
**ಗತ್ವಾ ನತ್ವಾ ತತ್ರ ಕೃಷ್ಣಂ ಪ್ರವಿಶನ್ಮಠಮುತ್ತಮಮ್ ॥೬೦॥**

ಪೂಜ್ಯರಾದ ಶ್ರೀಸುಧೀಂದ್ರತೀರ್ಥರು ಒಂದಾನೊಂದು ದಿನ ಮನ್ನಾರಿನ ಉನ್ನತವಾದ ಆಲಯವನ್ನು ಕುರಿತು ಹೋಗಿ, ಅಲ್ಲಿರುವ ಶ್ರೀಕೃಷ್ಣನಿಗೆ ನಮಿಸಿ ಉತ್ತಮವಾದ ಮಠವನ್ನು ಪ್ರವೇಶಿಸಿದರು. (**ಮನ್ನಾರುಗುಡಿ** ಎಂಬ ಪ್ರಸಿದ್ಧ ಕ್ಷೇತ್ರಕ್ಕೆ ಹೋಗಿ ಅಲ್ಲಿಯ ದೊಡ್ಡದೇವಸ್ಥಾನದಲ್ಲಿರುವ ಶ್ರೀಕೃಷ್ಣನಿಗೆ ವಂದಿಸಿ ತಮ್ಮ ಬಿಡಾರವಾದ ಮಠಕ್ಕೆ ಮರಳಿದರು.)

**ತತ್ರಸ್ಥೋಽದ್ವೈತಭಿಕ್ಷುಶ್ಚ ವಾದಾರ್ಥಮಗಮನ್ಮಠಂ ।**
**ತತ್ರ ದೃಷ್ಟ್ವಾ ಶ್ರೀಸುಧೀಂದ್ರಂ ಪೂರ್ವಪಕ್ಷಂ ಜಗಾದ ಸಃ ॥೬೧॥**

ಆ ಊರಿನಲ್ಲಿರುವ ಅದ್ವೈತಸಂನ್ಯಾಸಿಯು (ಶ್ರೀಸುಧೀಂದ್ರತೀರ್ಥರೊಡನೆ) ವಾಕ್ಯಾರ್ಥವನ್ನು ಮಾಡಲು ಮಠಕ್ಕೆ ಬಂದನು. ಅಲ್ಲಿ ಶ್ರೀಸುಧೀಂದ್ರತೀರ್ಥರನ್ನು ಕಂಡು ಆ ಭಿಕ್ಷುವು (ತನ್ನ ಮತರೀತ್ಯಾ) ಪೂರ್ವಪಕ್ಷವನ್ನು ಮಾಡಿದನು.

**ಗುರುಂ ನತ್ವಾ ಪರಿಮಳೋ ಯಜ್‌ಲುಗಂತೇ ಜಿಗಾಯ ತಂ ।**
**ಮಹಾಭಾಷ್ಯೇ ಜಯಂ ಪ್ರಾಪ್ತಂ ದೃಷ್ಟ್ವಾ ತುಷ್ಟೋಽಭವತ್ಪ್ರಭುಃ ॥೬೨॥**

ಶ್ರೀಪರಿಮಳಾಚಾರ್ಯರು ಗುರುಗಳಿಗೆ ನಮಿಸಿ **ಯಜ್‌ಲುಗಂತ** ವಿಷಯ

ದಲ್ಲಿ (ವ್ಯಾಕರಣಶಾಸ್ತ್ರದಲ್ಲಿ) ಆ ಅದ್ವೈತಸಂನ್ಯಾಸಿಯನ್ನು ಗೆದ್ದರು. ಪ್ರಭು ಗಳಾದ ಶ್ರೀಸುಧೀಂದ್ರತೀರ್ಥರು ಮಹಾಭಾಷ್ಯವಿಷಯದಲ್ಲಿ ಜಯಹೊಂದಿದ್ದನ್ನು ನೋಡಿ ಸಂತುಷ್ಟರಾದರು.

ಅ.ವಿ. :—ಅದ್ವೈತಸಂನ್ಯಾಸಿಯು ಜೀವಬ್ರಹ್ಮರು ಒಂದೇ ಎಂದು ವಾದಿ ಸಿದನು. ಆಗ ಶ್ರೀಪರಿಮಳಾಚಾರ್ಯರು, ನೀನು ಹೇಳುವ ವಿಷಯದಲ್ಲಿ ಪ್ರಮಾಣವೇನು ಎಂದು ಪ್ರಶ್ನಿಸಿದರು. ಆಗ ಆ ಸಂನ್ಯಾಸಿಯು ಸುಧೀಂದ್ರರ ಶಿಷ್ಯ ಪ್ರಶ್ನಿಸಿದ್ದಾನೆ ನಾನೇಕೆ ಉತ್ತರ ಹೇಳಬೇಕೆಂದು ತನ್ನ ಶಿಷ್ಯನಿಗೆ ಉತ್ತರಿಸಲು ಸೂಚಿಸಲು, ಆ ಸಂನ್ಯಾಸಿಯ ಶಿಷ್ಯನು ಮುಂದೆ ಬಂದು **"ವಿಶ್ವಂ ಮಿಥ್ಯಾ"** ಜಗತ್ತು ಸುಳ್ಳು ಆದ್ದರಿಂದ ಜೀವ ಬ್ರಹ್ಮರುಗಳಿಗೆ ಅಭೇದ ಎಂದು ಹೇಳಿದನು. ಆಗ ಶ್ರೀವೇಂಕಟಾರ್ಯರು ಜೀವಬ್ರಹ್ಮರುಗಳ ಅಭೇದ ವಿಚಾರಕ್ಕೆ ನೀನು ಹೇಳಿದ ಜಗತ್ತು ಸುಳ್ಳು ಎನ್ನುವದು ಪ್ರಮಾಣವಾಗುವದಿಲ್ಲ "ಕಿಂಚಾತಃ" ಮುಂದೇನು ಎಂದು ಕೇಳಿದರು. ವೇದಾಂತಶಾಸ್ತ್ರದಲ್ಲಿ ನಿರುತ್ತರನಾಗಿ ಪರಾಜಿತನಾದ ಅದ್ವೈತಸಂನ್ಯಾಸಿಯ ಶಿಷ್ಯನು ತನ್ನ ಸೋಲನ್ನು ಮುಚ್ಚಿಕೊಳ್ಳಲು, ವೇಂಕ ಟಾರ್ಯರಿಂದ ಹೇಳಲ್ಪಟ್ಟ **ಕಿಂಚಾತಃ** ಎಂಬ ಪದದ ಮೇಲೆ ವ್ಯಾಕರಣಶಾಸ್ತ್ರದ ಬಗ್ಗೆ ವಾಕ್ಯಾರ್ಥವನ್ನು ಪ್ರಾರಂಭಿಸಿದನು. ನೀವು ಪ್ರಯೋಗಿಸಿದ **ಕಿಂಚಾತಃ** ಎಂಬ ಪದವು ಶಾಸ್ತ್ರದಲ್ಲಿ ಎಲ್ಲಿಯೂ ಹೇಳಿಲ್ಲ, ಯಾವ ಪಂಡಿತರೂ ಕೇಳಿಲ್ಲ, ಇಂತಹ ಪದವನ್ನು ಪ್ರಯೋಗಿಸಿದ ನೀವು ಅಪಶಬ್ದಪ್ರಯೋಗಿಗಳು, ಅಪಂಡಿತರು ಎಂದು ಸಿದ್ಧವಾಯಿತು ಎಂದನು. ಆಗ ಶ್ರೀಪರಿಮಳಾಚಾರ್ಯರು ಮಹಾ ಭಾಷ್ಯದಲ್ಲಿ ಬಹಳ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂದು ಹೇಳಿ ಮಹಾಭಾಷ್ಯ ಪುಸ್ತಕವನ್ನು ತರಿಸಿ ತೋರಿಸಿ, ಶಾಸ್ತ್ರಪ್ರಸಿದ್ಧಶಬ್ದವಿದು ಪಾತಂಜಲಿಯ ಮಹಾ ಭಾಷ್ಯವನ್ನು ಓದಿದವರೆಲ್ಲರೂ ಕೇಳಿದ್ದಾರೆ ; ಮಹಾಭಾಷ್ಯವನ್ನು ಓದದೆ ಇರುವ ನೀವು ಕೇಳದೇ ಇದ್ದರೆ ನನ್ನ ತಪ್ಪಲ್ಲ. ಎಂದರು, ಶ್ರೀವೇಂಕಟಾರ್ಯರ ಮಾತಿಗೆ ಪ್ರತಿಹೇಳಲು ಅದ್ವೈತಸಂನ್ಯಾಸಿಗೂ ; ಆತನ ಶಿಷ್ಯನಿಗೂ ಸಾಧ್ಯವಾಗದೇ ಸೋತು ತೆರಳಿದರು.

**ಮಹಾಭಾಷ್ಯೇತಿ ಸಂಜ್ಞಾಂ ಚ ಶ್ರೀಸುಧೀಂದ್ರೋ ದದೌ ಮುದಾ ।**
**ತಸ್ಮಾತ್ತಂಜಾಪುರಂ ಗತ್ವಾ ಚಾಗತಂ ತತ್ರ ಪಂಡಿತಂ ॥೬॥**

**ಯಜ್ಞನಾರಾಯಣಂ ಭಟ್ಟಂ ತಂ ಜಿತ್ವಾಽತೋಷಯದ್ಗುರುಂ ।**
**ತೇನ ತಸ್ಮಾದ್ಭಟ್ಟಸಂಜ್ಞಾಂ ಲಬ್ಧವಾನ್ ಭಾಷ್ಯವೇಂಕಟಃ ॥೬೪॥**

ಶ್ರೀಸುಧೀಂದ್ರತೀರ್ಥರು (ಶ್ರೀವೇಂಕಟಾರ್ಯರಲ್ಲಿ ಮಹಾಭಾಷ್ಯದ ಪಾಂಡಿತ್ಯವನ್ನು ಕಂಡು (ಸಂತೋಷದಿಂದ) **ಮಹಾಭಾಷ್ಯ** ಎಂಬ ಚಿಹ್ನೆಯನ್ನು **ಕೂಡಾ ಕೊಟ್ಟರು.** (ಮಹಾಭಾಷ್ಯಾಚಾರ್ಯ ಎಂಬ ಬಿರುದನ್ನು ಕೊಟ್ಟರು). ಆ ಊರಿನಿಂದ ತಂಜಾಊರಿಗೆ ಹೋಗಿ ಅಲ್ಲಿಗೆ (ಮಠಕ್ಕೆ) ಬಂದ ಪಂಡಿತರಾದ–

ಪ್ರಸಿದ್ಧರಾದ **ಯಜ್ಞನಾರಾಯಣಭಟ್ಟರನ್ನು** ವಾದದಲ್ಲಿ ಗೆದ್ದು ಗುರುಗಳಾದ ಶ್ರೀಸುಧೀಂದ್ರತೀರ್ಥರನ್ನು ಸಂತೋಷಪಡಿಸಿದರು. ಆ ಭಟ್ಟರನ್ನು ಗೆಲ್ಲುವದರಿಂದ ಮಹಾಭಾಷ್ಯವೇಂಕಟಾರ್ಯರು ಶ್ರೀಸುಧೀಂದ್ರತೀರ್ಥರಿಂದ **ಭಟ್ಟ** ಎಂಬ ಚಿಹ್ನೆಯನ್ನು ಹೊಂದಿದರು. (ಭಟ್ಟ ಎಂಬ ಬಿರುದನ್ನು ಕೊಟ್ಟರು. ಅಂದಿನಿಂದ **ಮಹಾಭಾಷ್ಯವೀಣಾವೆಂಕಣ್ಣಭಟ್ಟರು** ಎಂದು ಪ್ರಸಿದ್ಧರಾದರು.)

**ತಂಜಾಪುರಾತ್ಕುಂಭಘೋಣಂ ಶ್ರೀಸುಧೀಂದ್ರಗುರುರ್ಗತಃ ।**
**ವೀಣಾವೇಂಕಟಭಟ್ಟಸ್ತು ತತ್ರೈವೋವಾಸ ವತ್ಸರಮ್ ॥೬೫॥**

ಗುರುಶ್ರೀಸುಧೀಂದ್ರತೀರ್ಥರು ತಂಜಾಊರಿನಿಂದ ಕುಂಭಘೋಣಕ್ಕೆ ಹೋದರು. ವೀಣಾವೆಂಕಣ್ಣಭಟ್ಟರಾದರೋ ಅಲ್ಲೇ ಒಂದು ವರ್ಷ ವಾಸ ಮಾಡಿದರು.

**ತತಃಸುಧೀಂದ್ರಗುರುಣಾ ಲಬ್ಧಾಜ್ಞಃಪ್ರಯಯೌ ಮುದಾ ।**
**ಗ್ರಾಮಂ ಗತ್ವಾಗ್ರಜಂ ನತ್ವಾ ಹರ್ಷಂ ತತ್ರಾಪ ವೇಂಕಟಃ ॥೬೬॥**

ಅನಂತರದಲ್ಲಿ ಶ್ರೀವೆಂಕಣ್ಣಭಟ್ಟರು (ಕುಂಭಘೋಣಕ್ಕೆ ಬಂದು) ಶ್ರೀಸುಧೀಂದ್ರಗುರುಗಳಿಂದ ಅಪ್ಪಣೆಯನ್ನು ಪಡೆದು ಹರ್ಷದಿಂದ ಊರಿಗೆ ಹೋದರು. ಅಲ್ಲಿ ಅಣ್ಣಂದಿರಾದ ಗುರುರಾಜಾಚಾರ್ಯರನ್ನು ಕಂಡು ನಮಸ್ಕರಿಸಿ ಆನಂದವನ್ನು ಹೊಂದಿದರು.

**ಇತಿ ಶ್ರೀರಾಘವೇಂದ್ರಗುರ್ವರ್ಚಕರಾಮಾಚಾರ್ಯಸುತ ವೇದವ್ಯಾಸಾಚಾರ್ಯರಚಿತೇ ಶ್ರೀಮದ್ರಾಘವೇಂದ್ರಾಣು-ವಿಜಯೇ ಪ್ರಥಮಃಸರ್ಗಃಸಮಾಪ್ತಃ ॥**

ಹೀಗೆಂದು ಶ್ರೀರಾಘವೇಂದ್ರಗುರುಸಾರ್ವಭೌಮರ ಮೂಲಬೃಂದಾವನದ ಅರ್ಚಕರಾದ ಶ್ರೀರಾಮಾಚಾರ್ಯರ ಮಕ್ಕಳಾದ **ಶ್ರೀವೇದವ್ಯಾಸಾಚಾರ್ಯ** ರಿಂದ ರಚಿತವಾದ **ಶ್ರೀರಾಘವೇಂದ್ರ ಅಣುವಿಜಯದಲ್ಲಿ** ಮೊದಲನೆಯ ಸರ್ಗವು ಮುಗಿದುದು.

---

## ದ್ವಿತೀಯಸ್ಸರ್ಗಃ—ಎರಡನೆಯ ಸರ್ಗವು

**ತತಃಕಾಲೇ ಸುಸಂಯಾತೇ ವೀಣಾವೇಂಕಟಪಂಡಿತಃ ।**
**ಶ್ರೀಮಧ್ವಾದಿಕೃತಾನ್‌ಗ್ರಂಥಾನ್ ಶಿಷ್ಯಾಂಶ್ಚ ಸಮಬೋಧಯತ್ ॥೧॥**

ಈ ರೀತಿ ಸಂತೋಷದಿಂದ ಕಾಲವು ಕಳೆಯುತ್ತಿರಲು ಪಂಡಿತರಾದ ವೀಣಾ ವೆಂಕಣ್ಣಭಟ್ಟರು ಶಿಷ್ಯರುಗಳಿಗೆ ಶ್ರೀಮದಾಚಾರ್ಯರೇ ಮೊದಲಾದವರಿಂದ ರಚಿತವಾದ ಗ್ರಂಥಗಳನ್ನು ಬೋಧನೆ ಮಾಡುತ್ತಿದ್ದರು (ಪಾಠವನ್ನು ಹೇಳುತ್ತಿದ್ದರು).

**ಸರಸ್ವತ್ಯಾಃಪ್ರಸಾರಂ ಶ್ರೀರ್ದೃಷ್ಟ್ವೈವ ಪ್ರಜಗಾಮ ಸಾ ।**
**ಸ್ನುಷಾಭಿವೃದ್ಧಿಂ ದೃಷ್ಟ್ವಾ ಹಿ ಶ್ವಶ್ರ್ವಾ ಲೋಕೇ ನ ಸಹ್ಯತೇ ॥೨॥**

ಜಗತ್ತಿನಲ್ಲಿ ಅತ್ತೆಯು ಸೊಸೆಯ ಏಳಿಗೆಯನ್ನು ನೋಡಿ ಸಹಿಸುವುದಿಲ್ಲವು. ಇದು ನಿಶ್ಚಯವು. ಆ ಶ್ರೀಲಕ್ಷ್ಮೀದೇವಿಯು ಶ್ರೀಸರಸ್ವತೀದೇವಿಯ ಅಭಿವೃದ್ಧಿಯನ್ನು ನೋಡಿಯೇ ಹೊರಟಳು.

ಅ. ವಿ. :—ಕೆಲವು ವರ್ಷಗಳು ಕಳೆದನಂತರ ಅಣ್ಣಂದಿರಾದ ಗುರುರಾಜಾಚಾರ್ಯರು ಸ್ವರ್ಗಸ್ಥರಾದ ಪ್ರಯುಕ್ತ ಸಂಸಾರದ ಹೊರೆಯನ್ನು ಹೊತ್ತ

ಶ್ರೀವೆಂಕಣ್ಣಭಟ್ಟರು ಬಡತನದ ಕಷ್ಟಗಳನ್ನನುಭವಿಸುತ್ತ ಶಿಷ್ಯರುಗಳಿಗೆ ಪಾಠ ವನ್ನು ಹೇಳುತ್ತಾ ವಾಸಮಾಡಿದ್ದರು. ಇದನ್ನು ಕವಿಗಳು ಚಮತ್ಕಾರರೀತಿಯಲ್ಲಿ ವರ್ಣಿಸಿದ್ದಾರೆ.

ಲೋಕದಲ್ಲಿ ಸೊಸೆಯ ಏಳಿಗೆಯನ್ನು ಕಂಡ ಅತ್ತೆ ಅದನ್ನು ಸಹಿಸ ಲಾರದೇ ಮನೆಬಿಟ್ಟು ಹೊರಡುವಳೋ ಅದರಂತೆ, ಶ್ರೀವೆಂಕಣ್ಣಭಟ್ಟರ ಪಾಂಡಿತ್ಯ ವನ್ನು ಕಂಡ ಶ್ರೀಲಕ್ಷ್ಮೀದೇವಿಯು, ಸೊಸೆಯಾದ ಸರಸ್ವತಿಗೆ ಇಲ್ಲಿ ಹೆಚ್ಚು ಪ್ರಾಶಸ್ತ್ಯವಿದೆ ನಾನೇಕೆ ಇಲ್ಲಿರುವದು ಎಂದು ಹೊರಟಳೋ ಏನೋ ಎಂದು ವರ್ಣಿಸಿದ್ದಾರೆ.

**ದಿನೇ ದಿನೇ ವೇಂಕಟಭಟ್ಟವರ್ಯೋ ದರಿದ್ರಭಾವಂ ಭಜತೀತಿ ವಾದಃ ।**
**ಅಹಂ ತು ಮನ್ಯೇ ಸ್ವಯಮೇವ ಗೇಹೇ**
**ಭಯಾಜ್ಜಹೀತೇ ಕಲಹಾಚ್ಛ್ರಿಯಂ ತಾಮ್ ॥೩॥**

ಶ್ರೀಪೂಜ್ಯವೆಂಕಣ್ಣಭಟ್ಟರು ಪ್ರತಿದಿನದಲ್ಲಿ ದಾರಿದ್ರ್ಯವನ್ನು ಅನುಭವಿ ಸುತ್ತಿದ್ದರು ಎಂದು ಜನರ ಹೇಳಿಕೆಯು, ನಾನಾದರೂ ಹೀಗೆ ತಿಳಿಯುವೆ, ಮನೆಯಲ್ಲಿ ಜಗಳದ ಹೆದರಿಕೆಯಿಂದ ತಾವೇನೇ ಆ ಶ್ರೀಲಕ್ಷ್ಮೀದೇವಿಯನ್ನು ಬಿಟ್ಟಿರುತ್ತಾರೆ.

**ಅ. ವಿ. :**—ಅತ್ತೆಸೊಸೆ ಒಂದೆಡೆಯಿದ್ದರೆ ಜಗಳವಾಗುವದು ಸಹಜ. ನಮ್ಮ ಮನೆಯಲ್ಲಿ ಹಾಗಾಗಕೂಡದು ಎಂದು ಶ್ರೀವೆಂಕಣ್ಣಭಟ್ಟರೇನೇ ಸೊಸೆ ಯಾದ ಶ್ರೀಸರಸ್ವತೀದೇವಿಯನ್ನಿಟ್ಟುಕೊಂಡು ಅತ್ತೆಯಾದ ಶ್ರೀಲಕ್ಷ್ಮೀದೇವಿ ಯನ್ನು ಬಿಟ್ಟಿದ್ದಾರೆ. ಒಬ್ಬರಿದ್ದರೆ ಕಲಹ ಇಲ್ಲ ಎಂಬ ಉದ್ದೇಶ್ಯದಿಂದ ಎಂದು ಕವಿಗಳು ಉತ್ಪ್ರೇಕ್ಷಾಮಾಡಿದ್ದಾರೆ.

ಶ್ರೀವೆಂಕಣ್ಣಭಟ್ಟರು ಇಂತಹ ದಾರಿದ್ರ್ಯವನ್ನನುಭವಿಸಲು ಕಾರಣ ವೇನೆಂದರೆ, ಪ್ರಾರಬ್ಧವನ್ನು ಎಲ್ಲರೂ ಅನುಭವಿಸಲೇಬೇಕು, ದಾರಿದ್ರ್ಯ ಬಂದರೂ ಚಿತ್ತಕ್ಷೋಭೆಯಿಂದ ತಮ್ಮ ಸತ್ಕಾರ್ಯಗಳನ್ನು ಬಿಡಕೂಡದು ಎನ್ನುವ ದನ್ನು ಜನತೆಗೆ ತಿಳಿಸುವದರ ಸಲುವಾಗಿ ಅನುಭವಿಸಿದರು.

**ಜಠರೇ ಶ್ರೀಸರಸ್ವತ್ಯಾಃ ಕ್ಷಾಮೋ ಮಾಸ ಇವಾಧಿಕಃ ।**
**ಅಸ್ಮಾಜ್ಜಾತಃ ಪುತ್ರವರ್ಯಃ ಶ್ರೀಮತಾಂ ಸುಖದಾಯಕಃ ॥೪॥**

ಬರಗಾಲದಲ್ಲಿ ಅಧಿಕವಾಸದಂತೆ ಶ್ರೀಸರಸ್ವತೀಬಾಯಿಯು ಗರ್ಭದಲ್ಲಿ ಶ್ರೀವೆಂಕಣ್ಣಭಟ್ಟರಿಗೆ ಸುಖವನ್ನು ಕೊಡುವ ಉತ್ತಮ ಮಗನು ಅವರಿಂದ ಜನಿಸಿದನು.

**ಜನಕಸ್ಯ ಋಣಾನ್ಮುಕ್ತೋ ವೇಂಕಟಾಚಾರ್ಯಪಂಡಿತಃ।**
**ಸ್ವಾಧ್ಯಾಯೇನ ಋಣಾನ್ಮುಕ್ತೋ ಋಷೀಣಾಂ ಚ ದಯಾನಿಧಿಃ ॥೫॥**

ದಯಾಸಮುದ್ರರೂ ಪಂಡಿತರೂ ಆದ ಶ್ರೀವೇಂಕಟಾಚಾರ್ಯರು (ಮಗ ಹುಟ್ಟುವದರಿಂದ) ಪಿತೃಋಣದಿಂದ ಮುಕ್ತರಾದರು. ಪಾಠಪ್ರವಚನದಿಂದ ಋಷಿಗಳ ಋಣದಿಂದಲೂಸಹ ಮುಕ್ತರಾದರು.

**ಲಕ್ಷ್ಮೀಚಿಹ್ನಿತನಾಮತ್ವಾದ್ದಾರಿದ್ರ್ಯಂ ಲಬ್ಧವಾನಹಂ।**
**ಇತಿ ಮತ್ವೇವ ತಂ ಚಕ್ರೇ ಲಕ್ಷ್ಮೀನಾರಾಯಣಾಹ್ವಯಂ ॥೬॥**

ಲಕ್ಷ್ಮಿಯ ಚಿಹ್ನವಿಲ್ಲದ ಹೆಸರುಳ್ಳಿಯಿರುವದರಿಂದ ನಾನು ದಾರಿದ್ರ್ಯವನ್ನು ಹೊಂದಿದೆನು ಎಂದು ತಿಳಿದವರಂತೆ ಆ ಕೂಸನ್ನು ಲಕ್ಷ್ಮೀನಾರಾಯಣ ಎಂಬ ಹೆಸರುಳ್ಳದ್ದನ್ನು ಮಾಡಿದರು.

ಅ. ವಿ. :— ಶ್ರೀವೆಂಕಣ್ಣಭಟ್ಟರು ಹುಟ್ಟಿದ ಗಂಡುಮಗುವಿಗೆ ಲಕ್ಷ್ಮೀ ನಾರಾಯಣ ಎಂದು ಹೆಸರಿಟ್ಟರು. ಇದಕ್ಕೆ ಕವಿಗಳು ಉತ್ಪ್ರೇಕ್ಷಿಸುತ್ತಾರೆ. ಶ್ರೀವೆಂಕಣ್ಣಭಟ್ಟರು ಯೋಚಿಸಿದರಂತೆ ; ನನಗೆ ಲಕ್ಷ್ಮೀ ಎಂಬ ಹೆಸರನ್ನು ಸೇರಿಸವೇ ಕೇವಲ ವೇಂಕಟನಾಥ ಎಂದು ಹೆಸರಿಟ್ಟಪ್ರಯುಕ್ತ ಬಡತನ ಬಂದಿತು. ಮಗನಿಗೆ ನಾರಾಯಣ ಎಂದು ಹೆಸರಿಟ್ಟರೆ ಇವರಿಗೂ ಎಲ್ಲಿ ದಾರಿದ್ರ್ಯ ಬರುತ್ತದೋ ಏನೋ ಎಂದು ಲಕ್ಷ್ಮೀನಾರಾಯಣ ಎಂದು ಹೆಸರಿಟ್ಟರು.

**ದಾರಿದ್ರ್ಯಾರ್ಣವಮಗ್ನಾಪಿ ಸುತಂ ದೃಷ್ಟ್ವಾ ತುತೋಷ ಸಾ।**
**ಅಪೇಕ್ಷಿತಸ್ಯ ಲಾಭೇನ ಕಸ್ಯ ತೋಷೋ ನ ಜಾಯತೇ ॥೭॥**

ಆ ಸರಸ್ವತೀಬಾಯಿಯು ಧಾರಿದ್ರ್ಯವೆಂಬ ಸಮುದ್ರದಲ್ಲಿ ಮುಳುಗಿದವಳಾದಾಗ್ಯೂ ಮಗನನ್ನು ನೋಡಿ ಸಂತೋಷಪಟ್ಟಳು. ಇಚ್ಛಿತ ಪದಾರ್ಥದ ಲಾಭದಿಂದ ಯಾರಿಗೆ ಸಂತೋಷ ಹುಟ್ಟುವದಿಲ್ಲ ? (ಸಂತೋಷವಾಗುವದು ಎಂದರ್ಥ) ಅರ್ಥಾಂತರನ್ಯಾಸ ಅಲಂಕಾರ.

**ದರ್ಶನೇನಾಸ್ಯ ಪುತ್ರಸ್ಯ ದಂಪತ್ಯೋಃಶಮವರ್ಧತ।**
**ದರ್ಶನೇನ ನವೀನಸ್ಯ ಕಿಂ ಚಿತ್ರಂ ಸುಖವರ್ಧನಮ್ ॥೮॥**

ಆ ಮಗನ ನೋಡುವಿಕೆಯಿಂದ ದಂಪತಿಗಳಿಗೆ ಸುಖವು ಬೆಳೆಯಿತು. ಹೊಸಪದಾರ್ಥದ ನೋಡುವಿಕೆಯಿಂದ ಸುಖವು ಬೆಳೆಯುವದು ಏನು ಆಶ್ಚರ್ಯ (ಏನೂ ಅಚ್ಚರಿ ಅಲ್ಲ ಎಂದರ್ಥ).

**ಏವಂ ಕಾಲೇ ಸಮಾಯಾತೇ ವೀಣಾವೇಂಕಟಪಂಡಿತಃ।**
**ಗ್ರಾಮಂ ಕಂಚಿದ್ವಿಜವರಃಶಿಷ್ಯಾಂಸ್ತ್ಯಕ್ತ್ವಾ ಯಯೌ ಸುಧೀಃ ॥೯॥**

ಹೀಗೆ ಕಾಲವು ಕಳೆಯುತ್ತಿರಲು ಬ್ರಾಹ್ಮಣ ಶ್ರೇಷ್ಠರಾದ ವೀಣಾವೆಂಕಟ ಪಂಡಿತರು ಶಿಷ್ಯರನ್ನು ಬಿಟ್ಟು ಒಂದು ಊರಿಗೆ ಹೋದರು.

**ಗ್ರಾಮೇ ತಸ್ಮಿನ್ ವೇಂಕಟಾರ್ಯೋ ನ್ಯಾಯಾಧಿಪಗೃಹಂ ಯಯೌ।**
**ಮಹೋತ್ಸವಂ ಚಕಾರಾಸೌ ಬ್ರಾಹ್ಮಣಾನ್ ಸಮಭೋಜಯತ್ ॥೧೦॥**

ಆ ಊರಿನಲ್ಲಿ ಶ್ರೀವೇಂಕಟಾರ್ಯರು ನ್ಯಾಯಾಧಿಪನ ಮನೆಗೆ ಹೋದರು. ಆ ನ್ಯಾಯಾಧಿಪನು ದೊಡ್ಡ ಉತ್ಸವವನ್ನು ಮಾಡಿದನು (ಮಾಡುತ್ತಿದ್ದನು). ಬ್ರಾಹ್ಮಣರುಗಳಿಗೆ ಊಟಮಾಡಿಸಿದನು (ಊಟಕ್ಕೆ ಆಮಂತ್ರಣವನ್ನು ಕೊಟ್ಟಿದ್ದನು).

**ಪುರೋಹಿತಸ್ತಸ್ಯ ಗೇಹೇ ಪೂಜಾಂ ಚಕ್ರೇ ಹರೇಸ್ತದಾ।**
**ವೇಂಕಟಾಚಾರ್ಯಂ ಗಂಧಕೃತ್ಯೈ ಮುದೇನ ಸಮಯೋಜಯತ್॥೧೧॥**

ಆಗ ನ್ಯಾಯಾಧಿಪನ ಮನೆಯಲ್ಲಿ ಪುರೋಹಿತನು ಶ್ರೀಹರಿಯ ಪೂಜೆಯನ್ನು ಮಾಡಿದನು. ಮುದದಿಂದ ಶ್ರೀವೇಂಕಟಾರ್ಯರನ್ನು ಗಂಧದ ಕೆಲಸಕ್ಕೋಸ್ಕರ (ಗಂಧವನ್ನು ತೆಗೆಯುವದಕ್ಕಾಗಿ) ಯೋಜಿಸಿದನು.

ಅ. ವಿ. :— ಕರೆಯದೇ ಇದ್ದರೂ ಉತ್ಸವ ನಡೆಯುವಲ್ಲಿ ಹೋಗಬಹುದು ಎಂಬ ನಿಯಮವನ್ನು ಅನುಸರಿಸಿ ಶ್ರೀವೆಂಕಟಭಟ್ಟರು ಸಮಾರಂಭವನ್ನು ನಡೆಸುತ್ತಿದ್ದ ಅನೇಕ ಬ್ರಾಹ್ಮಣರ ಭೋಜನಮಾಡಿಸುವದರಲ್ಲಿ ಆಸಕ್ತನಾದ ಯೋಗ್ಯನಾದ ನ್ಯಾಯಾಧಿಪನ ಮನೆಗೆ ಹೋದರು. ತಮ್ಮ ಸ್ನಾನಜಪ

ದೇವತಾರ್ಚನೆಗಳನ್ನು ಮುಗಿಸಿ ನಿರಾಡಂಬರರಾಗಿ ಪ್ರತಿದಿನದಂತಲೇ ಸೂಕ್ತ ಗಳನ್ನು ಪಠಿಸುತ್ತಾ ಒಂದೆಡೆ ಕುಳಿತ್ತಿದ್ದರು. ಸಾಮಾನ್ಯವಾಗಿ ದೊಡ್ಡದೊಡ್ಡ ಗೃಹಸ್ಥರ ಮನೆಯಲ್ಲಿದ್ದಂತೆ ಇಲ್ಲಿಯೂ ಕೂಡ ದೇವರ ಪೂಜೆ, ನೈವೇದ್ಯ, ಪುರೋಹಿತರದೇ ಅಡಕಾರಣ, ಪೂಜೆಗೆ ಸಾಕಾಗುವಷ್ಟು ಗಂಧಾಕ್ಷತೆಗಳನ್ನು ತೆಗೆದುಕೊಂಡು, ಪೂಜೆ ಮುಗಿಸಿದಮೇಲೆ ನೂರಾರು ಬ್ರಾಹ್ಮಣರಿಗೆ ಹಚ್ಚಿ ಕೊಳ್ಳಲು ಆಗುವಷ್ಟು ಗಂಧಾಕ್ಷತೆಗಳನ್ನು ತೆಗೆಯಲು ಅಶಕ್ತನಾದ ಪುರೋ ಹಿತನು, ಸುದೃಢಕಾಯರಾದ ಶ್ರೀವೆಂಕಟಭಟ್ಟರನ್ನು ನೋಡಿ, ನ್ಯಾಯಾಧಿಪನ ಮನೆಯ ಪುರೋಹಿತನೆಂಬ ಅಹಂಕಾರದಿಂದ ಶ್ರೀವೆಂಕಟಭಟ್ಟರ ಪರಿಚಯ ವಿಲ್ಲದ ಪ್ರಯುಕ್ತ ಬ್ರಾಹ್ಮಣರಿಗೆ ಸಾಕಾಗುವಷ್ಟು ಗಂಧಾಕ್ಷತೆಗಳನ್ನು ತೆಗೆಯಲು, ಸಾಣೇಕಲ್ಲು, ಗಂಧದ ಕೊರಡು, ಅಕ್ಷತೆಸಾಮಾನುಗಳನ್ನು ತೋರಿಸಿ ಅಪ್ಪಣೆ ಮಾಡಿದನು.

**ತದ್ವೈವ ಶ್ರೀವೇಂಕಟಾರ್ಯಸ್ತ್ರಥೈವ ಭವತು ದ್ವಿಜ !**
**ಇತ್ಯುಕ್ತ್ವಾ ಸೋಽಗ್ನಿಸೂಕ್ತಂ ತು ಪಠನ್ ಗಂಧಂ ಪಿಪೇಷ ಹಿ ॥೧೨॥**

ಬ್ರಾಹ್ಮಣನೇ! ಹಾಗೇ ಆಗಲಿ ಎಂದು ಹೇಳಿ ಆಗಲೇ ಶ್ರೀವೇಂಕಟಾ ರ್ಯರು ಅಗ್ನಿಸೂಕ್ತವನ್ನು ಪಠಿಸುವವರಾಗಿ ಗಂಧವನ್ನು ತೆಯಿದರು (ನಿಶ್ಚಯವು).

ಅ. ವಿ. :— ಶ್ರೀವೆಂಕಟಭಟ್ಟರು ಪ್ರತಿದಿನವೂ ಪಂಚಸೂಕ್ತವನ್ನು ಪಾರಾಯಣ ಮಾಡುತ್ತಿದ್ದರು. ಅದರಂತೆ ಇಂದುಕೂಡಾ ಪಾರಾಯಣವನ್ನು ಮಾಡುತ್ತಾ ಕುಳಿತಿದ್ದರು. ಗಂಧವನ್ನು ತೆಗೆಯುವ ವೇಳೆ ಅಗ್ನಿಸೂಕ್ತವನ್ನು ಹೇಳುವ ವೇಳೆ ಒಂದೇ ಆಯಿತು.

**ತದಾ ಪುರೋಹಿತೋ ಗಂಧಂ ಬ್ರಾಹ್ಮಣೇಭ್ಯೋ ದದೌ ಮುದಾ ।**
**ಸಂಲಿಪ್ಯ ಹಿ ದ್ವಿಜಾಃಸರ್ವೇ ಗಾತ್ರೇ ತಾಪಂ ಪ್ರಪೇದಿರೇ ॥೧೩॥**

ಆಗ ಪುರೋಹಿತನು (ಬಹಳ ಗಂಧವನ್ನು ತೆಯಿದದ್ದನ್ನು ನೋಡಿ) ಸಂತೋಷದಿಂದ, ಬ್ರಾಹ್ಮಣರುಗಳಿಗೆ ಗಂಧವನ್ನು ಕೊಟ್ಟನು. ಎಲ್ಲ ಬ್ರಾಹ್ಮ ಣರು ದೇಹದಲ್ಲಿ ಹಚ್ಚಿಕೊಂಡು ತಾಪವನ್ನು ಹೊಂದಿದರು ನಿಶ್ಚಯವು (ಗಂಧ ವನ್ನು ಹಚ್ಚಿಕೊಂಡಕೂಡಲೇ ಬ್ರಾಹ್ಮಣರ ದೇಹ ಉರಿಯಲಾರಂಭಿಸಿತು).

**ನ್ಯಾಯಾಧಿಪಃ ಕಿಮಾಶ್ಚರ್ಯಮಿತ್ಯಾಲೋಚ್ಯಾವದದ್ ದ್ವಿಜಂ।**
**ಪುರೋಹಿತ ಕೃತಂ ಕಾರ್ಯಂ ವಿಸ್ತರಾದ್ವದ ನಿರ್ಭಯಂ ॥೧೪॥**

ನ್ಯಾಯಾಧಿಪನು (ತಾಪಪಡುವ ಬ್ರಾಹ್ಮಣರನ್ನು ನೋಡಿ) ಏನಾಶ್ಚರ್ಯವು ಎಂದು ಯೋಚಿಸಿ, ಪುರೋಹಿತರೇ! ಮಾಡಲ್ಪಟ್ಟ ಕಾರ್ಯವು ವಿಸ್ತಾರವಾಗಿ ನಿರ್ಭಯದಿಂದ ಹೇಳಿ ಎಂದು ಪುರೋಹಿತಬ್ರಾಹ್ಮಣನನ್ನು ಕುರಿತು ಮಾತನಾಡಿದನು (ಕೇಳಿದನು).

**ಪುರೋಹಿತಸ್ತದಾ ಧೈರ್ಯಮವಲಂಬ್ಯಾವದತ್ಪ್ರಭುಂ।**
**ಪರಸ್ಥಳಬ್ರಾಹ್ಮಣೇನ ಗಂಧಶ್ಚಾನೇನ ಕಾರಿತಃ ॥೧೫॥**

ಆಗ ಪುರೋಹಿತನು ಈ ಪರಸ್ಥಳಬ್ರಾಹ್ಮಣನಿಂದ ಗಂಧವು ಮಾಡಿಸಲ್ಪಟ್ಟಿತು ಎಂದು ಧೈರ್ಯವನ್ನು ಹೊಂದಿ ತನ್ನ ಸ್ವಾಮಿಗೆ ಹೇಳಿದನು.

**ಏವಂ ದ್ವಿಜವಚಃಶ್ರುತ್ವಾ ಸ ಗೃಹಸ್ಥೋ ನಿನಿಂದ ತಮ್।**
**ವೇಂಕಟಾರ್ಯೇಣ ತತ್ಕಾರ್ಯಂ ಕಥಂ ಕಾರಿತವಾನಸಿ ॥೧೬॥**

ಈ ರೀತಿಯ ಬ್ರಾಹ್ಮಣನ (ಪುರೋಹಿತನ) ವಾಕ್ಯವನ್ನು ಕೇಳಿ ಆ ನ್ಯಾಯಾಧಿಪನು ಶ್ರೀವೇಂಕಟಾರ್ಯರಿಂದ ಆ ಗಂಧತೆಗೆಯುವ ಕೆಲಸವನ್ನು ಹೇಗೆ ಮಾಡಿಸಿದಿ ಎಂದು ಆ ಪುರೋಹಿತನನ್ನು ನಿಂದಿಸಿದನು.

**ಪುರೋಹಿತಂ ಸ ಉಕ್ತ್ವೇತ್ಥಮಪರಾಧಃಕೃತೋ ಮಹಾನ್।**
**ಬ್ರಾಹ್ಮಣೇನ ಮದೀಯೇನ ಕ್ಷಮಸ್ವ ವಿದುಷಾಂ ವರ ॥೧೭॥**

ಆ ನ್ಯಾಯಾಧೀಶನು, ಹೀಗೆ (ಪುರ್ವೋಕ್ತರೀತಿಯಿಂದ) ಪುರೋಹಿತನನ್ನು ಕುರಿತು ಹೇಳಿ, ವಿದ್ವದ್ವರ್ಯರೇ! ನನ್ನವನಾದ ಬ್ರಾಹ್ಮಣನಿಂದ ಹೆಚ್ಚಿನ ಅಪರಾಧವು ಮಾಡಲ್ಪಟ್ಟಿತು; ಕ್ಷಮಿಸಿರಿ.

**ಇತ್ಯುಕ್ತೋ ವೇಂಕಟಾಚಾರ್ಯೋ ಗಂಧಮಾನೀಯ ಪಂಡಿತಃ।**
**ಪುನರ್ವರುಣಸೂಕ್ತೇನ ದತ್ತವಾನಭಿಮಂತ್ರಿತಮ್ ॥೧೮॥**

ಹೀಗೆ ಪ್ರಾರ್ಥಿಸಲ್ಪಟ್ಟ ಪಂಡಿತರಾದ ಶ್ರೀವೇಂಕಟಾಚಾರ್ಯರು (ಉಳಿದ)

ಗಂಧವನ್ನು ತರಿಸಿ ಮತ್ತೆ ವರುಣಸೂಕ್ತದಿಂದ ಅಭಿಮಂತ್ರಿತವಾದದ್ದನ್ನು ಕೊಟ್ಟರು. (ವರುಣಸೂಕ್ತದಿಂದ ಅಭಿಮಂತ್ರಿಸಿ ಆ ಗಂಧವನ್ನು ಕೊಟ್ಟರು.)

**ಪುನಸ್ತಂ ಲೇಪಯಿತ್ವಾ ತಾನ್ ಬ್ರಾಹ್ಮಣಾನ್ ಅವದತ್ ಪ್ರಭುಃ ।**
**ಕಥಮಸ್ತ್ಯಧುನಾ ತಾಪೋ ? ಭವದ್ಭಿಃಕಥ್ಯತಾಮಿತಿ ॥೧೯॥**

ನ್ಯಾಯಾಧಿಪನು ಆ ಗಂಧವನ್ನು ಮತ್ತೆ ಬ್ರಾಹ್ಮಣರಿಗೆ ಹಚ್ಚಿ ಈಗ ತಾಪವು ಹೇಗಿದೆ ನಿಮ್ಮಿಂದ ಹೇಳಲ್ಪಡಲಿ ಎಂದು ಬ್ರಾಹ್ಮಣರನ್ನು ಕೇಳಿದನು.

**ಏವಂ ನ್ಯಾಯಾಧಿಪೇನೋಕ್ತಾ ಬ್ರಾಹ್ಮಣಾಃಪ್ರೋಚಿರೇ ಪ್ರಭುಂ ।**
**ಅಧುನಾ ಶೀತಲೋ ಗಂಧೋ ಮಹಾನಂದಕರಃಪ್ರಭೋ ॥೨೦॥**

ಈ ರೀತಿ ನ್ಯಾಯಾಧಿಪನಿಂದ ಹೇಳಲ್ಪಟ್ಟ (ಕೇಳಲ್ಪಟ್ಟ) ಬ್ರಾಹ್ಮಣರು ಪ್ರಭೋ ! ಈಗ ತಣ್ಣಗಾದ ಗಂಧವು ಅತ್ಯಾನಂದಕರವು ಎಂದು (ನ್ಯಾಯಾಧಿಪನಿಗೆ) ಹೇಳಿದರು.

**ತದಾ ಸರ್ವೇ ಬ್ರಾಹ್ಮಣಾಸ್ತೇ ನತ್ವಾ ಶ್ರೀವೇಂಕಟಾರ್ಯಕಂ ।**
**ಜ್ಞಾನಿಶ್ರೇಷ್ಠ ! ದ್ವಿಜಶ್ರೇಷ್ಠ ! ತ್ವತ್ಸಮೋ ನಾಸ್ತಿ ಭೂತಲೇ ॥೨೧॥**

**ಏವಂ ವದದ್ಬ್ರಾಹ್ಮಣಾಸ್ತಂ ಪ್ರಣೇಮುಸ್ತೇ ಮುಹುರ್ಮುಹುಃ ।**
**ಇತ್ಯುಕ್ತಸ್ತೈರ್ದ್ವಿಜಶ್ಚೋಚೇ ಬ್ರಾಹ್ಮಣಾನ್ ವೇದಪಾರಗಾನ್ ॥೨೨॥**

ಆಗ ಎಲ್ಲ ಬ್ರಾಹ್ಮಣರು ಶ್ರೀವೇಂಕಟಾರ್ಯರಿಗೆ ನಮಸ್ಕರಿಸಿ, ಜ್ಞಾನಿಶ್ರೇಷ್ಠ ! ದ್ವಿಜಶ್ರೇಷ್ಠ ! ಭೂಮಿಯಲ್ಲಿ ನಿಮ್ಮ ಸಮರು ಇಲ್ಲ.

ಹೀಗೆ ಹೇಳಿ ಆ ಬ್ರಾಹ್ಮಣರು ಆ ಶ್ರೀವೇಂಕಟನಾಥರನ್ನು ಮತ್ತೆ ಮತ್ತೆ ನಮಸ್ಕರಿಸಿದರು. ಬ್ರಾಹ್ಮಣರಿಂದ ಈರೀತಿ ಉಕ್ತರಾದ ಶ್ರೀಮಹಾಭಾಷ್ಯಾಚಾರ್ಯರು ವೇದಪಾರಂಗತರಾದ ಬ್ರಾಹ್ಮಣರನ್ನು ಕುರಿತು ಹೇಳಿದರು.

**ಸ್ತುತಿರ್ಮೇನೈವ ಕರ್ತವ್ಯಾ ಜ್ಞಾನವೃದ್ಧ್ಯೈರ್ದ್ವಿಜೋತ್ತಮೈಃ ।**
**ಮಾಹಾತ್ಮ್ಯೇಽಸ್ಮಿಂಶ್ಚ ಯೋ ಹೇತುಃಸ ನಮ್ಯೋ ವಾಸುದೇವಕಃ ॥೨೩॥**

ಜ್ಞಾನವೃದ್ಧರಾದ ಬ್ರಾಹ್ಮಣೋತ್ತಮರುಗಳಿಂದ ನನ್ನ ಸ್ತೋತ್ರವು ಮಾಡಲ್ಪಡಕೂಡದು. ಮತ್ತು ಈ ಮಾಹಾತ್ಮ್ಯೆಯಲ್ಲಿ ಯಾರು ಕಾರಣರೋ ಆ ಶ್ರೀವಾಸುದೇವನು ನಮನಕ್ಕೆ ಅರ್ಹನು.

**ತತೋ ನ್ಯಾಯಾಧಿಪಸ್ತಸ್ಮೈ ರೂಪ್ಯಕಾಣಾಂ ಶತಂ ದದೌ ।**
**ತತೋ ದ್ವಿಜೋ ಗೃಹಂ ಗತ್ವಾ ಸಮಾಃಕಾಶ್ಚಿತ್ ಸ ನೀತವಾನ್ ॥೨೪॥**

ಅನಂತರದಲ್ಲಿ ನ್ಯಾಯಾಧಿಪನು ಶ್ರೀವೆಂಕಟನಾಥರಿಗೆ ನೂರು ರೂಪಾಯಿ ಗಳನ್ನು ಕೊಟ್ಟನು. ಆಮೇಲೆ ಆ ಪರಿಮಳಾಚಾರ್ಯರು ಮನೆಗೆ ಹೋಗಿ, ಕೆಲವರ್ಷಗಳನ್ನು ಕಳೆದರು.

**ಕುಂಭಘೋಣಪುರೀಂ ಗತ್ವಾ ತತೋ ನತ್ವಾ ಗುರುಂ ವರಂ ।**
**ಸ್ವದಾರಿದ್ರ್ಯಂ ವಾಚಯಿತ್ವಾ ವೇಂಕಟಾರ್ಯೋ ನರೈಃಪರೈಃ ॥೨೫॥**

ಕೆಲವುಕಾಲ ಕಳೆದ ಮೇಲೆ ಶ್ರೀವೇಂಕಟಾಚಾರ್ಯರು ಕುಂಭಘೋಣಪಟ್ಟ ಣಕ್ಕೆ ಹೋಗಿ ಉತ್ತಮಗುರುಗಳಾದ ಶ್ರೀಸುಧೀಂದ್ರರಿಗೆ ವಂದಿಸಿ (ತಮ್ಮ ದಾರಿ ದ್ರ್ಯವನ್ನು ಹೇಳುವದಕ್ಕೆ ಲಜ್ಜೆಯಿಂದ) ಬೇರೇ ಜನರುಗಳಿಂದ ತಮ್ಮ ದಾರಿದ್ರ್ಯ ವನ್ನು ಹೇಳಿಸಿ (ಶ್ರೀಗುರುಗಳ ಉತ್ತರವನ್ನು ನಿರೀಕ್ಷಿಸುತ್ತಾ ಕುಳಿತರು).

**ಶ್ರೀಸುಧೀಂದ್ರಸ್ತದಾಲೋಚ್ಯ ಸಕುಟುಂಬೋಽತ್ರ ಸರ್ವದಾ ।**
**ವಸ ತ್ವಂ ವೇಂಕಟಾಚಾರ್ಯೇತ್ಯವದಚ್ಛಾತ್ರಲೋಭತಃ ॥೨೬॥**

ಶ್ರೀಸುಧೀಂದ್ರತೀರ್ಥರು ಇಂಥಹ ಶಿಷ್ಯನು ಸಿಗುವದು ವಿರಳ ಎಂದು ಯೋಚಿಸಿ, ಛಾತ್ರಲೋಭದಿಂದ, ವೇಂಕಟಾಚಾರ್ಯ! ಹೆಂಡತಿಯಿಂದ ಕೂಡಿ ಕೊಂಡು ಇಲ್ಲಿ ಯಾವಾಗಲೂ ವಾಸಮಾಡು ಎಂದು ಅಪ್ಪಣೆ ಮಾಡಿದರು.

**ತದಾರಭ್ಯ ಸದಾರೋಽಸೌ ಕುಂಭಘೋಣಪುರೇ ವಸನ್ ।**
**ಗುರೌ ಭಕ್ತಿಯುತೋ ವಿಪ್ರಃಸೇವಾಂ ಚಕ್ರೇಽಧಿಕಾಂ ಮುದಾ ॥೨೭॥**

ಅಂದಿನಿಂದ ಆರಂಭಿಸಿ ಶ್ರೀವೇಂಕಟಾಚಾರ್ಯರು ಹೆಂಡತಿಯಿಂದ ಕೂಡಿ ಕೊಂಡು ಕುಂಭಘೋಣಪಟ್ಟಣದಲ್ಲಿ ವಾಸಮಾಡಿದವರಾಗಿ ಸಂತೋಷದಿಂದ ಶ್ರೀಸುಧೀಂದ್ರರಲ್ಲಿ ಭಕ್ತಿಯುಕ್ತರಾಗಿ ಹೆಚ್ಚಿನ ಸೇವೆಯನ್ನು ಮಾಡಿದರು.

**ಸುಧೀಂದ್ರಗುರುರೇತಸ್ಮಿನ್ ದಿವಸೇಽಶಕ್ತಿಮಾನಭೂತ್ ।**
**ತತಃಪ್ರೋಚೇ ವೇಂಕಟಾರ್ಯಂ ಸ್ವಾಶ್ರಮಂ ಸ್ವೀಕುರು ಪ್ರಿಯ ॥೨೮॥**

(ಕೆಲವು ವರ್ಷಗಳು ಕಳೆದಮೇಲೆ) ಒಂದಾನೊಂದುದಿನ ಶ್ರೀಸುಧೀಂದ್ರ ತೀರ್ಥರು ಅಶಕ್ತತೆವುಳ್ಳವರಾದರು. ಆಮೇಲೆ ಪ್ರಿಯಶಿಷ್ಯನೇ! ಉತ್ತಮವಾದ ಸಂನ್ಯಾಸಾಶ್ರಮವನ್ನು ತೆಗೆದುಕೋ ಎಂದು ಶ್ರೀವೇಂಕಟಾರ್ಯನನ್ನು ಕುರಿತು ಹೇಳಿದರು.

**ತ್ವದನ್ಯೋ ನಾಸ್ತಿ ಯೋಗ್ಯೋಽಸ್ಮೈ ತುರ್ಯಾಯ ಸ್ವಾಶ್ರಮಾಯ ವೈ ।**
**ಇತ್ಯುಕ್ತೋ ವೇಂಕಟಾಚಾರ್ಯೋ ಗುರುಂ ನತ್ವಾ ತದಾವದತ್ ॥೨೯॥**

ಈ ನಾಲ್ಕನೆಯದಾದ ಶ್ರೇಷ್ಠ ಸಂನ್ಯಾಸಾಶ್ರಮಕ್ಕೆ ನಿನ್ನ ವಿನಹ ಯೋಗ್ಯರು ಇಲ್ಲ ನಿಶ್ಚಯವು (ಎಂದು ಹೇಳಿದರು). ಈ ರೀತಿ ಗುರುಗಳಿಂದ ಆಜ್ಞಪ್ತರಾದ ಶ್ರೀವೇಂಕಟಾಚಾರ್ಯರು ಗುರುಗಳಿಗೆ ನಮಸ್ಕರಿಸಿ ಆಗ ಮಾತನಾಡಿದರು.

**ಜ್ಞಾನಿಶ್ರೇಷ್ಠ ಯತಿಶ್ರೇಷ್ಠ ವಿನಾ ತುರ್ಯಾಶ್ರಮಂ ವದ ।**
**ಸರ್ವಾಶಕ್ಯಂ ಮಹಾಕಾರ್ಯಮಪಿ ತತ್ಕ್ರಿಯತೇ ಪ್ರಭೋ ॥೩೦॥**

ಜ್ಞಾನನಿಧಿಗಳಾದ ಯತಿಶ್ರೇಷ್ಠರೇ! ಸಂನ್ಯಾಸಾಶ್ರಮವನ್ನು ಬಿಟ್ಟು (ಬೇರೆ ಯಾವದನ್ನು ಬೇಕಾದರೂ) ಹೇಳಿ, ಎಲ್ಲರಿಂದ ಮಾಡಲು ಅಶಕ್ಯವಾದ ದೊಡ್ಡ ಕಾರ್ಯವೂ ಕೂಡಾ ಪ್ರಭುಗಳೇ! (ನನ್ನಿಂದ) ಮಾಡಲ್ಪಡುತ್ತದೆ.

**ಬಾಲಾ ಭಾರ್ಯಾ ಬಾಲಕೋ ನೋಪನೀತ-**
**ಸ್ತಸ್ಮಾನ್ನಾಸ್ತಿ ಸ್ವಾಶ್ರಮೇಽಸ್ಮಿನ್ ಮನೀಷಾ ।**
**ಪಾಂಡಿತ್ಯಂ ಮೇ ಜ್ಞಾತಮಸ್ತಿ ಪ್ರಭೋ ತೇ**
**ಕಾರ್ಯಾದಸ್ಮಾತ್ ಮುಚ್ಯತಾಂ ಮೌನಿವರ್ಯ ॥೩೧॥**

ಮುನಿಶ್ರೇಷ್ಠರೇ! ಹೆಂಡತಿಯು ಚಿಕ್ಕವಳು, ಮಗನು ಅನುಪನೀತನು. (ಮಗನಿಗೆ ಉಪನಯನವನ್ನು ಮಾಡಿಲ್ಲ.) ಆದಪ್ರಯುಕ್ತ ಈ ಸಂನ್ಯಾಸಾಶ್ರಮ ದಲ್ಲಿ ಇಚ್ಛೆಯು ಇಲ್ಲ. ಪ್ರಭುಗಳೇ! ನನ್ನ ಪಾಂಡಿತ್ಯವು ತಮಗೆ ತಿಳಿದಿದ್ದೇ ಇದೆ. (ಆದಕಾರಣ) ಈ ಆಶ್ರಮದ ಕಾರ್ಯದಿಂದ ಬಿಡಲ್ಪಡಲಿ.

ಏವಂ ಶಿಷ್ಯಂ ಪ್ರಾರ್ಥಯಂತಂ ಶ್ರೀಸುಧೀಂದ್ರಸ್ತದಾವದತ್ ।
ವಾಸನಾ ವಿಷಯಾಣಾಂ ಸೇತ್ಯಧುನಾಪಿ ಗತಾ ನ ತೇ ॥೩೨॥

ಆ ಸುಧೀಂದ್ರತೀರ್ಥರು ಈ ರೀತಿ ಪ್ರಾರ್ಥಿಸುವ ಶಿಷ್ಯನನ್ನು ಕುರಿತು ನಿನಗೆ ಇನ್ನೂ ವಿಷಯಗಳ ಆ ವಾಸನೆಯು ಹೋಗಿಲ್ಲ ಎಂದು ಹೇಳಿದರು.

ತತಸ್ತ್ಯಕ್ತ್ವಾ ವೇಂಕಟಾರ್ಯಂ ಭಾಗಿನೇಯಂ ಸ್ವಶಿಷ್ಯಕಂ ।
ಆಹೂಯ ತಸ್ಮೈ ದತ್ವಾ ಸ ತುರ್ಯಾಶ್ರಮಮನುತ್ತಮಂ ॥೩೩॥

ಯಾದವೇಂದ್ರೇತಿ ನಾಮಾಸ್ಯ ಕೃತ್ವಾ ಪ್ರೀತ್ಯಾ ದದೌ ಗುರುಃ ।
ಮೂಲರಾಮಂ ವಿನಾ ತಸ್ಮೈ ಸರ್ವಾ ಮೂರ್ತೀರ್ಮನೋರಮಾಃ ॥೩೪॥

ಅನಂತರದಲ್ಲಿ ಶ್ರೀವೇಂಕಟಾರ್ಯರನ್ನು ಬಿಟ್ಟು ತಂಗಿಯ ಮಗನಾದ ತಮ್ಮ ಶಿಷ್ಯನನ್ನು ಕರೆದು, ಶ್ರೀಸುಧೀಂದ್ರತೀರ್ಥರು ಆತನಿಗೆ ಉತ್ತಮವಾದ ಕೊನೆಯ ಆಶ್ರಮವನ್ನು (ಸಂನ್ಯಾಸಾಶ್ರಮವನ್ನು) ಕೊಟ್ಟು —

ಅವರಿಗೆ ಶ್ರೀಯಾದವೇಂದ್ರತೀರ್ಥರು ಎಂದು ಹೆಸರನ್ನು ಕೊಟ್ಟು (ಹೆಸರನ್ನಿಟ್ಟು) ಶ್ರೀಗುರುಗಳಾದ ಸುಧೀಂದ್ರತೀರ್ಥರು, ಯಾದವೇಂದ್ರರಿಗೆ ಶ್ರೀಮೂಲರಾಮದೇವರನ್ನು ಬಿಟ್ಟು ಸುಂದರವಾದ ಎಲ್ಲ ಮೂರ್ತಿಗಳನ್ನು ಸಂತೋಷದಿಂದ ಕೊಟ್ಟರು.

ಆಜ್ಞಪ್ತಃ ಶ್ರೀಸುಧೀಂದ್ರೇಣ ಯಾದವೇಂದ್ರಶ್ಚಚಾರ ಗಾಂ ।
ಮೂಲರಾಮಸ್ಯ ಪೂಜಾಂ ತು ಕೃತವಾನ್ ಶ್ರೀಸುಧೀಂದ್ರಕಃ ॥೩೫॥

(ಶ್ರೀಸುಧೀಂದ್ರತೀರ್ಥರು ದೇಹಾಲಸ್ಯದಿಂದ ಮುಕ್ತರಾದ ಪ್ರಯುಕ್ತ) ಶ್ರೀಯಾದವೇಂದ್ರರು ಶ್ರೀಸುಧೀಂದ್ರರಿಂದ ಅಪ್ಪಣೆ ಪಡೆದುಕೊಂಡು ಭೂಮಿಯನ್ನು ಸಂಚರಿಸಿದರು. ಶ್ರೀಸುಧೀಂದ್ರತೀರ್ಥರು ಶ್ರೀಮೂಲರಾಮದೇವರ ಪೂಜೆಯನ್ನು ಮಾಡಿದರು.

ದೇಹೇಽಶಕ್ತಿಂ ಸ್ವಸ್ಯ ದೃಷ್ಟ್ವಾ ಯಾದವೇಂದ್ರಂ ಚ ದೂರಗಂ ।
ಶ್ರೀಸುಧೀಂದ್ರಶ್ಚಿಂತಯನ್ಸನ್ನೇವಂ ಕಾಲಂ ಸ ನೀತವಾನ್ ॥೩೬॥

ಪ್ರಸಿದ್ಧರಾದ ಶ್ರೀಸುಧೀಂದ್ರತೀರ್ಥರು ತಮ್ಮ ದೇಹದಲ್ಲಿ (ಪುನಃ) ಆಶಕ್ತಿ

ಯನ್ನು ಕಂಡು, ಮತ್ತು ದೂರದಲ್ಲಿ ಸಂಚರಿಸುತ್ತಿರುವ ಯಾದವೇಂದ್ರರನ್ನು (ತಿಳಿದು) ಹೀಗೆ ಚಿಂತಿಸುವವರಾಗಿ ಕಾಲವನ್ನು ಕಳೆದರು.

ಅ. ವಿ. :— ಕೆಲವು ಕಾಲಗಳು ಕಳೆದಮೇಲೆ ತಮ್ಮ ದೇಹದಲ್ಲಿ ಪುನಃ ಆಲಸ್ಯವನ್ನು ಕಂಡು, ಶ್ರೀಸುಧೀಂದ್ರತೀರ್ಥರು ವೇಂಕಟನಾಥನು ಆಶ್ರಮವು ಬೇಡ ಎನ್ನುತ್ತಾನೆ ; ಯಾದವೇಂದ್ರರಾದರೋ ಸಂಚಾರತ್ವೇನ ದೂರ ಹೋಗಿದ್ದಾರೆ ; ಶ್ರೀಮೂಲರಾಮದೇವರ ಪೂಜೆ ನಿಲ್ಲಕೂಡದಲ್ಲ ಏನು ಮಾಡಲಿ ಎಂದು ಚಿಂತೆಗೊಳಗಾದರು.

**ಏಕಸ್ಮಿನ್ ದಿವಸೇ ರಾತ್ರೌ ಶ್ರೀಸುಧೀಂದ್ರಸ್ಯ ಧೀಮತಃ ।**
**ಸ್ವಪ್ನೇ ಶ್ರೀಮೂಲರಾಮೋ ಹಿ ಪ್ರಾಗತ್ಯೋವಾಚ ತಂ ಪ್ರತಿ ॥೩೭॥**

ಒಂದು ದಿನ ರಾತ್ರಿಯಲ್ಲಿ ಪಂಡಿತರಾದ ಶ್ರೀಸುಧೀಂದ್ರತೀರ್ಥರ ಸ್ವಪ್ನದಲ್ಲಿ (ಕನಸಿನಲ್ಲಿ) ಶ್ರೀಮೂಲರಾಮದೇವರು ಬಂದು ಶ್ರೀಸುಧೀಂದ್ರತೀರ್ಥರನ್ನು ಕುರಿತು ಮಾತನಾಡಿದರು. ನಿಶ್ಚಯವು.

**ತುರ್ಯಾಶ್ರಮಂ ವೇಂಕಟಾಯ ದೇಹಿ ತ್ವಂ ಪಂಡಿತಾಯ ಚ ।**
**ಮತ್ಪೂಜಾಕರಣೇ ಯೋಗ್ಯಂ ವಿಜಾನೀಹಿ ತಮೇವ ಹಿ ॥೩೮॥**

ನೀನು ವಿದ್ವಾಂಸನಾದ ವೇಂಕಟನಾಥನಿಗೆ ಕೊನೆಯ ಆಶ್ರಮವನ್ನು (ಸಂನ್ಯಾಸಾಶ್ರಮವನ್ನು) ಕೊಡು. ಮತ್ತು ನನ್ನ ಪೂಜೆಮಾಡುವ ವಿಷಯದಲ್ಲಿ ಆ ವೇಂಕಟನಾಥನನ್ನೇ ಯೋಗ್ಯನನ್ನಾಗಿ ತಿಳಿ. ನಿಶ್ಚಯವು.

**ಇತ್ಯುಕ್ತಃಶ್ರೀಸುಧೀಂದ್ರಾರ್ಯಃಪ್ರಾತರುತ್ಥಾಯ ಸಜ್ಜನಾನ್ ।**
**ಆಹೂಯ ರಾತ್ರೌ ದೃಷ್ಟಂ ಚ ಸ್ವಪ್ನಂ ಸರ್ವಾನ್ ಜಗಾದ ಸಃ ॥೩೯॥**

ಈ ರೀತಿ ಆಜ್ಞಪ್ತರಾದ ಪೂರ್ವಪ್ರಸಿದ್ಧರಾದ ಶ್ರೀಸುಧೀಂದ್ರತೀರ್ಥರಾದರೋ ಪ್ರಾತಃಕಾಲದಲ್ಲಿ ಎದ್ದು ಸಜ್ಜನರನ್ನು ಕರೆದು ರಾತ್ರಿಯಲ್ಲಿ ಕಂಡ ಸ್ವಪ್ನವನ್ನು ಹೇಳಿದರು.

**ತತಃಶ್ರೀವೇಂಕಟಾಚಾರ್ಯಂ ಪ್ರೋವಾಚಾಹೂಯ ತಂ ಸುಧೀಃ ।**
**ಶಿಷ್ಯವರ್ಯ ! ತ್ವಿದಾನೀಂ ತೇ ವಾಸನಾವಿಷಯೇಷು ವೈ ॥೪೦॥**

**ಗತಾ ನಾ ನ ಗತಾನೇತಿ ಸ್ವೀಕುರು ತ್ವಂ ವರಾಶ್ರಮಮ್**
**ಲಕ್ಷ್ಮೀನಾರಾಯಣಸ್ಯಾಸ್ಯ ತವ ಪುತ್ರಸ್ಯ ಶಿಷ್ಯಕ !**
**ಮುದೋಪನಯನಾರ್ಥಂ ತ್ವಂ ಗೃಹಾಣೇದಂ ಧನಂ ತ್ವಿತಿ ||೪೧||**

ಅನಂತರದಲ್ಲಿ ಧೀಮಂತರಾದ ಶ್ರೀಸುಧೀಂದ್ರತೀರ್ಥರು ಆ ವೇಂಕಟಾಚಾರ್ಯರನ್ನು ಕರೆದು ಮಾತನಾಡಿದರು; ಶಿಷ್ಯೋತ್ತಮನೇ! ನಿನಗೆ ಈಗಲಾದರೂ ವಿಷಯಗಳಲ್ಲಿ ವಾಸನಾಗಳು (ವಿಷಯವಾಸನಾಗಳು) —

ಹೋಗಿದಿಯೋ, ಇಲ್ಲವೋ ಎಂದು (ಕೇಳಿದರು) ; ನೀನು ಉತ್ತಮವಾದ ಆಶ್ರಮವನ್ನು (ಸಂನ್ಯಾಸಾಶ್ರಮವನ್ನು) ತೆಗೆದುಕೋ, ಶಿಷ್ಯನೇ ! ನಿನ್ನ ಮಗನಾದ ಈ ಲಕ್ಷ್ಮೀನಾರಾಯಣನಿಗೆ ಉಪನಯನಕ್ಕೋಸ್ಕರ ಈ ದ್ರವ್ಯವನ್ನು ತೆಗೆದುಕೋ ಎಂದು (ಹೇಳಿದರು).

**ಅತ್ಯಾದರಂ ಗುರೋರ್ದೃಷ್ಟ್ವಾ ಸ್ವಾಶ್ರಮೇ ಪಂಡಿತಾಗ್ರಣೀಃ ।**
**ಸ್ವಂ ಗೃಹೀತ್ವಾ ವೇಂಕಟಾರ್ಯಸ್ತೂಷ್ಣೀಂ ಸ್ಥಿತ್ವಾ**
**ಗೃಹಂ ಯಯೌ ||೪೨||**

ಪಂಡಿತಶ್ರೇಷ್ಠರಾದ ಶ್ರೀವೇಂಕಟಾರ್ಯರು ತಮ್ಮ ಆಶ್ರಮವಿಷಯದಲ್ಲಿ ಗುರುಗಳ ಅತ್ಯಾದರವನ್ನು ನೋಡಿ, ಸುಮ್ಮನಿದ್ದು (ಅವರಿಂದ ಕೊಡಲ್ಪಟ್ಟ) ಹಣವನ್ನು ತೆಗೆದುಕೊಂಡು ಮನೆಗೆ ಹೋದರು.

**ಸ ಶುಭೇ ದಿವಸೇ ಸ್ವಸ್ಯ ತನಯಸ್ಯೋಪನಾಯನಮ್ ।**
**ಪ್ರಚಕಾರ ಸುಲಗ್ನೇ ತು ವೀಣಾವೇಂಕಟಪಂಡಿತಃ ||೪೩||**

ಆ ವೀಣಾವೆಂಕಟಭಟ್ಟರು, ಶುಭದಿನ ಶುಭಲಗ್ನದಲ್ಲಿ ತಮ್ಮ ಮಗನಿಗೆ ಉಪನಯನವನ್ನು ಮಾಡಿದರು.

**ತಸ್ಯಾಂ ರಾತ್ರೌ ದಿವ್ಯರೂಪಾಪ್ರಾಗತ್ಯೋವಾಚ ಶಾರದಾ ।**
**ವೇಂಕಟಾರ್ಯ ! ಜ್ಞಾನಿವರ್ಯ ! ಸ್ವಾಶ್ರಮಂ ಸ್ವೀಕುರು ದ್ವಿಜ ||೪೪||**

ಅಂದಿನ ರಾತ್ರಿಯಲ್ಲಿ ಸುಂದರರೂಪವುಳ್ಳ ಶ್ರೀಶಾರದಾದೇವಿಯು ಬಂದು, ಜ್ಞಾನಿಶ್ರೇಷ್ಠ ! ವೇಂಕಟಾರ್ಯ ! ಉತ್ತಮ ಆಶ್ರಮವನ್ನು ತೆಗೆದುಕೋ (ಎಂದು) ಹೇಳಿದಳು.

**ತಚ್ಛೃತ್ವಾ ವೇಂಕಟಾರ್ಯೋಽಸೌ ಗುರೂನ್ನತ್ವಾ ನ್ಯವೇದಯತ್ ।**
**ತೇನ ರಾತ್ರೌ ದೃಷ್ಟರೂಪಂ ಶಾರದಾಯಾ ವಚಸ್ತದಾ ॥೪೫॥**

ಆಗ ಶ್ರೀಶಾರದಾದೇವಿಯ ವಾಕ್ಯವನ್ನು ಕೇಳಿ ಆ ವೇಂಕಟಾರ್ಯರು (ಬೆಳಗಾದಮೇಲೆ) ಗುರುಗಳಿಗೆ ನಮಸ್ಕರಿಸಿ ರಾತ್ರಿಯಲ್ಲಿ (ತಮ್ಮಿಂದ) ನೋಡಲ್ಪಟ್ಟ ಶ್ರೀಶಾರದಾದೇವಿಯ ರೂಪವು, ಶ್ರೀಶಾರದಾದೇವಿಯ ವಾಕ್ಯವು ಸಹ ವಿಜ್ಞಾಪಿಸಲ್ಪಟ್ಟಿತು.

**ತಚ್ಛೃತ್ವಾ ಶ್ರೀಸುಧೀಂದ್ರಾರ್ಯೋ ಹೃಷ್ಟಚಿತ್ತೋಽಭವತ್ಕಿಲ ।**
**ಗುರುಶಿಷ್ಯೌ ಸಮಾಲೋಚ್ಯ ದ್ವೌ ತು ತಂಜಾಪುರಂ ಗತೌ ॥೪೬॥**

ವೇಂಕಟನಾಥರ ವಾಕ್ಯವನ್ನು ಕೇಳಿ ಶ್ರೀಸುಧೀಂದ್ರತೀರ್ಥರು ಸಂತುಷ್ಟಮನಸ್ಕರಾದರು. ನಿಶ್ಚಯವು. ಗುರುಗಳಾದ ಶ್ರೀಸುಧೀಂದ್ರತೀರ್ಥರು ಶಿಷ್ಯರಾದ ಶ್ರೀವೇಂಕಟನಾಥರು, ಸಮಾಲೋಚಿಸಿ ಈರ್ವರೂ ತಂಜಾವೂರಿಗೆ ಹೋದರು.

ಅ. ವಿ. :—ಈ ಊರಿನಲ್ಲಿಯೇ ಆಶ್ರಮದ ಕಾರ್ಯವು ನಡೆದರೆ ಅತಿಶಯ ಪ್ರೀತಿಯುಳ್ಳ ಶ್ರೀಮತೀಸರಸ್ವತೀಬಾಯಿ, ಮತ್ತು ಚಿ॥ ಲಕ್ಷ್ಮೀನಾರಾಯಣನು ತಡೆಗಟ್ಟಬಹುದು ಎಂದು ಯೋಚಿಸಿ ಪರಿವಾರದಿಂದೊಡಗೂಡಿ ಗುರುಶಿಷ್ಯರಿಬ್ಬರೂ ತಂಜಾವೂರಿಗೆ ಹೋದರು.

**ರುಧಿರೋದ್ಗಾರಿ ಶರದಿ ಫಾಲ್ಗುಣೇ ಶುಕ್ಲಪಕ್ಷಕೇ ।**
**ತುರ್ಯಾಶ್ರಮಂ ದ್ವಿತೀಯಾಯಾಂ ಶ್ರೀಸುಧೀಂದ್ರಾತ್**
**ಸ ಲಬ್ಧವಾನ್ ॥೪೭॥**

ಶ್ರೀವೇಂಕಟನಾಥರು, ರುಧಿರೋದ್ಗಾರಿ ಸಂವತ್ಸರ ಫಾಲ್ಗುಣ ಶುದ್ಧ ದ್ವಿತೀಯಾ ಶ್ರೀಸುಧೀಂದ್ರತೀರ್ಥರಿಂದ ಯತ್ಯಾಶ್ರಮವನ್ನು ಹೊಂದಿದರು.

**ತತೋ ಗುರುಂ ಶ್ರೀಸುಧೀಂದ್ರಃಪೌರಾನಾಹೂಯ ಸರ್ವಶಃ ।**
**ಅಭಿಷೇಕಂ ಕಾರಯಿತ್ವಾ ಮೂಲರಾಮಂ ಚ ದತ್ತವಾನ್ ॥೪೮॥**

ಆಶ್ರಮವಾದಮೇಲೆ ಶ್ರೀಸುಧೀಂದ್ರತೀರ್ಥರು ಎಲ್ಲ ಪಟ್ಟಣಿಗರನ್ನು ಕರೆದು, ಆಶ್ರಮವನ್ನು ಪಡೆದು ಜನತೆಗೆ ಗುರುಗಳಾದವರಿಗೆ ಅಭಿಷೇಕವನ್ನು ಮಾಡಿ ಶ್ರೀಮೂಲರಾಮದೇವರನ್ನು ಕೂಡ ಕೊಟ್ಟರು.

**ಚತುಷಷ್ಟಿಕಲಾಃಪ್ರೋಕ್ತ್ವಾ ವಿಜಯೀಂದ್ರಗುರೂದಿತಾಃ ।**
**ಛಾತ್ರಸ್ಯಾಖ್ಯಾಂ ರಾಘವೇಂದ್ರ ಇತಿ ಚಕ್ರೇ ಸುಧೀಂದ್ರಕಃ ॥೪೯॥**

ಶ್ರೀಸುಧೀಂದ್ರತೀರ್ಥರುಗುರುಗಳಾದ ಶ್ರೀವಿಜಯೀಂದ್ರತೀರ್ಥರಿಂದ ಉಪದೇಶಿಸಲ್ಪಟ್ಟ ಅರವತ್ತಾನ್ನಲ್ಕು ವಿದ್ಯೆಗಳನ್ನು ಶಿಷ್ಯನಿಗೆ ಹೇಳಿ ರಾಘವೇಂದ್ರ ಎಂದು ಹೆಸರಿಟ್ಟರು.

**ರಾಘವೇಂದ್ರೇಣ ಸಹಿತಃಕುಂಭಘೋಣಂ ಯಯೌ ಗುರುಃ ।**
**ಕಾಂಶ್ಚಿನ್ಮಾಸಾಂಸ್ತತ್ರ ನೀತ್ವಾ ಸ್ವಾವಸಾನಂ ಬುಬೋಧ ಸಃ ॥೫೦॥**

ಪ್ರಸಿದ್ಧ ಗುರುಗಳಾದ ಶ್ರೀಸುಧೀಂದ್ರತೀರ್ಥರು ಶ್ರೀರಾಘವೇಂದ್ರಯತಿಗಳಿಂದ ಕೂಡಿಕೊಂಡು ಕುಂಭಘೋಣಪಟ್ಟಣಕ್ಕೆ ಪ್ರಯಾಣಮಾಡಿದರು. ಅಲ್ಲಿ ಕೆಲವು ತಿಂಗಳುಗಳನ್ನು ಕಳೆದು ತಮ್ಮ ಅವಸಾನಕಾಲವು ಸಮೀಪಿಸಿತೆಂದು ತಿಳಿದರು.

**ಅನಂತರಂ ಶ್ರೀಸುಧೀಂದ್ರಃಪಂಪಾಕ್ಷೇತ್ರಂ ಯಯೌ ಮುದಾ ।**
**ಕಾಂಶ್ಚಿನ್ಮಾಸಾಂಸ್ತತ್ರ ತಪ್ತ್ವಾ ಬಭೌ ವೃಂದಾವನೇ ತತಃ ॥೫೧॥**

ಅನಂತರದಲ್ಲಿ ಶ್ರೀಸುಧೀಂದ್ರತೀರ್ಥರು (ತಮ್ಮ ಸಂಸ್ಥಾನವನ್ನಾಳಲು ಅರ್ಹರಾದ ಶಿಷ್ಯ ಸಿಕ್ಕಿದ್ದಾನೆ ಎಂಬ) ಸಂತೋಷದಿಂದ (ಎಲ್ಲವನ್ನೂ ಶ್ರೀರಾಘವೇಂದ್ರತೀರ್ಥರಿಗೆ ಒಪ್ಪಿಸಿ) ಹಂಪಿಕ್ಷೇತ್ರಕ್ಕೆ ಹೊರಟರು. ಅಲ್ಲಿ ಕೆಲವು ತಿಂಗಳುಗಳು ತಪಸ್ಸನ್ನು ಮಾಡಿ, ಬೃಂದಾವನದಲ್ಲಿ ಪ್ರಕಾಶಿಸಿದರು. (ಬೃಂದಾವನಸ್ಥರಾದರು.)

**ಇತಿ ಶ್ರೀರಾಘವೇಂದ್ರಾಣುವಿಜಯೇ ದ್ವಿತೀಯಸರ್ಗಃಸಮಾಪ್ತಃ ॥**

ಹೀಗೆ ಶ್ರೀರಾಘವೇಂದ್ರಾಣುವಿಜಯದಲ್ಲಿ ಎರಡನೆಯ ಸರ್ಗವು ಮುಗಿಯಿತು.



## ತೃತೀಯಸರ್ಗಃ — ಮೂರನೆಯ ಸರ್ಗವು

**ಸುಧೀಂದ್ರಾನಂತರಂ ಶ್ರೀಮಾನ್ ರಾಘವೇಂದ್ರೋಽಧ್ಯುವಾಸ ಸಃ ।**
**ಕುಂಭಘೋಣಂ ಸುಕಾವೇರ್ಯಾ ವಿದ್ವದ್ಭಿಶ್ಚ ವಿರಾಜಿತಂ ॥೧॥**

ಶ್ರೀಸುಧೀಂದ್ರತೀರ್ಥರ ಅನಂತರದಲ್ಲಿಪ್ರಸಿದ್ಧರಾದ ಪೂಜ್ಯರಾದ ಶ್ರೀರಾಘವೇಂದ್ರತೀರ್ಥರು, ಕಾವೇರೀನದಿಯಿಂದ ಮತ್ತು ವಿದ್ವಾಂಸರುಗಳಿಂದ ವಿರಾಜಮಾನವಾದ ಕುಂಭಘೋಣದಲ್ಲಿ ವಾಸಮಾಡಿದರು.

**ಶ್ರೀಜಯೀಂದ್ರಾಭಿದಾಂಸ್ತತ್ರ ಚತುಷ್ಷಷ್ಟಿ ಕಲಾನ್ವಿತಾನ್**
**ಚತುರ್ಯುಕ್ತಶತಗ್ರಂಥಾ ಯತ್ಕೃತಾ ವಾದಿನಿಗ್ರಹೇ ।**
**ಪರಮಾಂಶ್ಚ ಗುರೂನ್ನತ್ವಾ ತದೀಯಂ ಮಠಮಾಗತಃ ॥೨॥**

ಆ ಕುಂಭಘೋಣದಲ್ಲಿ ಅರವತ್ತುನಾಲ್ಕುಕಲಾಗಳಿಂದ ಯುಕ್ತರಾದ ಮತ್ತು ವಾದಿಗಳ ನಿಗ್ರಹವಿಷಯದಲ್ಲಿ ನೂರಾನಾಲ್ಕುಗ್ರಂಥಗಳು ಯಾರಿಂದ ಮಾಡಲ್ಪಟ್ಟಿತೋ (ಅಂತಹ) ಪರಮಗುರುಗಳಾದ (ಬೃಂದಾವನದಲ್ಲಿ ವಿರಾಜಮಾನರಾದ) ಶ್ರೀವಿಜಯೀಂದ್ರತೀರ್ಥರಿಗೆ ನಮಸ್ಕರಿಸಿ ಶ್ರೀವಿಜಯೀಂದ್ರ ಮಠಕ್ಕೆ ಬಂದರು.

**ಪ್ರಿಯಾ ಸರಸ್ವತೀ ಭಾರ್ಯಾ ಪತಿಂ ಸ್ವೀಕೃತಸ್ವಾಶ್ರಮಂ**
**ಶ್ರುತ್ವಾ ಕೂಪೇ ಪತಿತ್ವಾ ತು ದೇಹಂ ತತ್ಯಾಜ ಮಾನಿನೀ ।**
**ತತಶ್ಚಾಸಾದಯಾಮಾಸ ಪೈಶಾಚೀಂ ಸತ್ವರಂ ತನುಂ ॥೩॥**

ಅಭಿಮಾನಿಯಾದ ಪ್ರಿಯಹೆಂಡತಿಯಾದ ಸರಸ್ವತೀಬಾಯಿಯು ಗಂಡನು ಆಶ್ರಮವನ್ನು ತೆಗೆದುಕೊಂಡದ್ದನ್ನು ಕೇಳಿ ಶೀಘ್ರವಾಗಿ ಬಾವಿಯಲ್ಲಿ ಬಿದ್ದು ದೇಹವನ್ನುಬಿಟ್ಟಳು. ಆಮೇಲೆ ಪಿಶಾಚಿದೇಹವನ್ನು ಹೊಂದಿದಳು.

**ಸುವ್ಯವಸ್ಥಿತಪ್ರಾರಬ್ಧಂ ಬ್ರಹ್ಮಣಾಪ್ಯನುಭೂಯತೇ ।**
**ತತಸ್ತಾಂ ರಾಘವೇಂದ್ರಾರ್ಯಶ್ಚೋದ್ದಧಾರ ತದೈವ ಹಿ ॥೪॥**

ಸುನಿಶ್ಚಿತವಾದ ಪ್ರಾರಬ್ಧವು ಚತುರ್ಮುಖಬ್ರಹ್ಮನಿಂದಲೂ ಅನುಭವಿಸ

ಲ್ಪಡುತ್ತದೆ. ಶ್ರೀರಾಘವೇಂದ್ರತೀರ್ಥರು, ಪಿಶಾಚದೇಹ ಬಂದ ಆಕೆಯನ್ನು ಉದ್ಧಾರಮಾಡಿದರು. (ಪ್ರಾರಬ್ಧವು ಎಲ್ಲರಿಂದಲೂ ಅನುಭವಿಸಲೇಬೇಕು. ಶ್ರೀಮತೀ ಸರಸ್ವತೀಬಾಯಿಯವರಿಗೆ ಪ್ರಾರಬ್ಧಕ್ಕನುಗುಣವಾಗಿ ಬಂದ ಪಿಶಾಚ ದೇಹವನ್ನು ಶ್ರೀರಾಯರು ಪರಿಹರಿಸಿದರು).

**ಅದ್ಯಪ್ರಭೃತ್ಯಸ್ಮದೀಯೈರ್ವಿವಾಹಾದಿಷು ಪೂಜಿತಾ।**
**ಭವತ್ವಿಯಮಿತಿ ಪ್ರೋಚೇ ದಯಾಳುರ್ಭಕ್ತವತ್ಸಲಃ ॥೫॥**

ಭಕ್ತವತ್ಸಲರೂ ದಯಾಳುಗಳೂ ಆದ ಶ್ರೀರಾಘವೇಂದ್ರತೀರ್ಥರು, ಇಂದಿನಿಂದ ನಮ್ಮ ಪೂರ್ವಾಶ್ರಮದ ವಂಶಜರಿಂದ ವಿವಾಹಾದಿಗಳಲ್ಲಿ ಪೂಜಿತಳಾಗಲಿ ಎಂದು ಹೇಳಿದರು.

**ತದೈವ ಸಾ ತು ಪೈಶಾಚೀಂ ತನುಂ ತ್ಯಕ್ತ್ವಾ ದಿವಂ ಯಯೌ।**
**ಸರಸ್ವತೀ ತದಾರಭ್ಯ ಪೂಜಿತಾಽಸ್ತೇ ಸ್ವವಂಶಜೈಃ ॥೬॥**

ಆಗಲೇ ಆ ಸರಸ್ವತೀಬಾಯಿ ಆದರೋ ಪಿಶಾಚದೇಹವನ್ನು ಬಿಟ್ಟು ಸ್ವರ್ಗಕ್ಕೆ ಹೋದಳು. ಅಂದಿನಿಂದ ಆರಂಭಿಸಿ ಶ್ರೀರಾಯರ ಪೂರ್ವಾಶ್ರಮದ ವಂಶಜರಿಂದ (ವಿವಾಹಾದಿಗಳಲ್ಲಿ) ಪೂಜಿತಳಾಗುತ್ತಿದ್ದಾರೆ.

**ದಿನಾನಿ ಕತಿ ತತ್ರೈವ ರಾಘವೇಂದ್ರ ಉವಾಸ ಸಃ ।**
**ವಿದ್ವಜ್ಜನೈರ್ಯೋಗಿವರ್ಯೈರ್ಮಿಲಿತ್ವಾ ಹೃಷ್ಟಮಾನಸಃ ॥೭॥**

ಪ್ರಸಿದ್ಧರಾದ ಶ್ರೀರಾಘವೇಂದ್ರತೀರ್ಥರು ಕೆಲವು ದಿನಗಳು ಆ ಕುಂಭಘೋಣಪಟ್ಟಣದಲ್ಲಿಯೇ ಪಂಡಿತರಿಂದ ಯೋಗಿಶ್ರೇಷ್ಠರಿಂದ ಕೂಡಿಕೊಂಡು ಸಂತುಷ್ಟಮನಸ್ಕರಾಗಿದ್ದರು.

**ಯಾದವೇಂದ್ರಶ್ಚ ತತ್ಕಾಲೇ ಕುಂಭಘೋಣಪುರಂ ಪ್ರತಿ ।**
**ಗತ್ವಾ ದೃಷ್ಟ್ವಾ ರಾಘವೇಂದ್ರಂ ಮೂಲರಾಮಂ ಸ್ಮ ಯಾಚತೇ ॥೮॥**

ಆ ಕಾಲದಲ್ಲಿ ಶ್ರೀಯಾದವೇಂದ್ರರಾದರೋ ಕುಂಭಘೋಣಪಟ್ಟಣಕ್ಕೆ ಬಂದು ಶ್ರೀರಾಘವೇಂದ್ರತೀರ್ಥರನ್ನು ನೋಡಿ, ಶ್ರೀಮೂಲರಾಮದೇವರನ್ನು ಕೇಳಿದರು.

ಅ. ವಿ. :—ಶ್ರೀಯಾದವೇಂದ್ರರು ಶ್ರೀರಾಯರಿಗೆ ಆಶ್ರಮವಾದದ್ದನ್ನು ಕೇಳಿ ಕುಂಭಘೋಣಕ್ಕೆ ಬಂದು, ಶ್ರೀರಾಯರಲ್ಲಿ ಹೋಗಿ ನಮಗೆ ಮೊದಲು ಆಶ್ರಮವನ್ನು ಕೊಟ್ಟಿದ್ದಾರೆ. ನಾವು ಆಶ್ರಮಜ್ಯೇಷ್ಠರು ಕಾರಣ ಶ್ರೀಮೂಲ ರಾಮದೇವರ ಪ್ರತಿಮೆಯು ನಮಗೇ ಸಲ್ಲತಕ್ಕದ್ದು ಎಂದು, ಹೇಳಿದರು.

**ತದಾ ಶ್ರೀರಾಘವೇಂದ್ರಾರ್ಯೈಃಸರ್ವಂ ಸ್ವೀಕುರು ಜ್ಯೇಷ್ಠ ಭೋ !**
**ಸನ್ನಿಧೌ ವಿಜಯೀಂದ್ರಸ್ಯ ಟಿಪ್ಪಣೀ ಕ್ರಿಯತೇ ಮಯಾ ॥೯॥**

ಆಗ ಪೂಜ್ಯರಾದ ಶ್ರೀರಾಘವೇಂದ್ರತೀರ್ಥರು. ಜ್ಯೇಷ್ಠರಾದ ಯಾದ ವೇಂದ್ರರೇ ! ಎಲ್ಲವನ್ನೂ ತೆಗೆದುಕೊಳ್ಳಿ, ನನ್ನಿಂದ ಶ್ರೀವಿಜಯೀಂದ್ರತೀರ್ಥರ ಸನ್ನಿಧಿಯಲ್ಲಿ ಟಿಪ್ಪಣಿಯು ಮಾಡಲ್ಪಡುತ್ತದೆ (ಎಂದರು).

ಅ. ವಿ :—ಸರಳಹೃದಯಿಗಳಾದ ಶ್ರೀರಾಯರು ಶ್ರೀಮೂಲರಾಮನ ಪ್ರತಿಮೆ ಒಂದೇ ಏಕೆ ಸಂಸ್ಥಾನವನ್ನೂ ತೆಗೆದುಕೊಳ್ಳಿ ನಾನು ಶ್ರೀವಿಜಯೀಂದ್ರ ತೀರ್ಥರ ಸನ್ನಿಧಿಯಲ್ಲಿ ಪೂಜ್ಯ ಗುರುಗಳ ಗ್ರಂಥಗಳಿಗೆ ವ್ಯಾಖ್ಯಾನವನ್ನು ಬರೆಯುತ್ತ ಕಾಲವನ್ನು ಕಳೆಯುವೆ, ಸಂಸ್ಥಾನಾಧಿಪತ್ಯದ ಆಶೆ ಎನಗಿಲ್ಲ, ಎಂದರು.

**ಉಕ್ತವಂತಂ ರಾಘವೇಂದ್ರಮಠೀಯಾಃಪ್ರೋಚುರಂಜಸಾ ।**
**ನಿರೀರ್ಷ್ಯಯೋಗಿವರ್ಯ ! ತ್ವಂ ಗುರುಸ್ವಪ್ನಂ ಸ್ಮರ ಪ್ರಭೋ ॥೧೦॥**

ಹೀಗೆ ಹೇಳಿದ ಶ್ರೀರಾಘವೇಂದ್ರತೀರ್ಥರನ್ನು ಕುರಿತು, ಮಠದಲ್ಲಿ ವಾಸಿಸಿದವರು, ಈರ್ಷ್ಯಾರಹಿತರಾದ, ಯೋಗಿಶ್ರೇಷ್ಠರಾದ ಪ್ರಭುಗಳೇ ! ನೀವು ಗುರುಗಳಾದ ಶ್ರೀಸುಧೀಂದ್ರತೀರ್ಥರಿಗೆ ಬಿದ್ದ ಸ್ವಪ್ನವನ್ನು ನೆನೆಯಿರಿ ಎಂದು ವಿಜ್ಞಾಪಿಸಿದರು.

**ಮಾ ದೇಹಿ ಮೂಲರಾಮಂ ಹೋ ! ಶಾರದೋಕ್ತಂ ಚ ಸಂಸ್ಮರ ।**
**ತ್ವಯಾ ಪಾಲಯತಾ ರಾಜ್ಯಂ ಟಿಪ್ಪಣೀಕ್ರಿಯತಾಮಿತಿ ॥೧೧॥**

ಗುರುವರ್ಯ ! ಶ್ರೀಶಾರದಾದೇವಿಯು ಹೇಳಿದ್ದನ್ನು ಕೂಡಾ ಚೆನ್ನಾಗಿ ಸ್ಮರಿಸಿ, (ಕಾರಣ) ಶ್ರೀಮೂಲರಾಮದೇವರ ಪ್ರತಿಮೆಯನ್ನು ಕೊಡಬೇಡಿ. ನಿಮ್ಮಿಂದ ವೇದಾಂತಸಾಮ್ರಾಜ್ಯವೂ ರಕ್ಷಿಸಲ್ಪಡಲಿ, ಟಿಪ್ಪಣಿಯೂ ಮಾಡಲ್ಪಡಲಿ ಎಂದು (ಬಿನ್ನವಿಸಿದರು).

**ಆನಂದತೀರ್ಥಸಾಮ್ರಾಜ್ಯಂ ಮಾ ದೇಹ್ಯಸ್ಮೈ ಕದಾಪಿ ಭೋ!**
**ದಾಸ್ಯಸಿ ತ್ವಂ ಯದಿ ಗುರೋ ಸಾಹಸಂ ಕರವಾಮಹೈ ॥೧೨॥**

ಗುರುಗಳೇ! ಶ್ರೀಮದಾನಂದತೀರ್ಥರಿಂದ ದೃಢೀಕರಿಸಿದ ವೇದಾಂತ ಸಾಮ್ರಾಜ್ಯವನ್ನು ಈ ಶ್ರೀಯಾದವೇಂದ್ರರಿಗೆ ಕೊಡಬೇಡಿ. ನೀವು ಕೊಟ್ಟಪಕ್ಷ ದಲ್ಲಿ (ನಾವು) ಸಾಹಸವನ್ನು ಮಾಡುತ್ತೇವೆ. ನಿಶ್ಚಯವು.

**ಇತಿ ಪ್ರಾರ್ಥಯತಃ ಸ್ವೀಯಾನ್ ದೃಷ್ಟ್ವಾ ತೂಷ್ಣೀಂ ಸ್ಥಿತೋ ಗುರುಃ।**
**ತೂಷ್ಣೀಂ ಸ್ಥಿತಂ ಗುರುಂ ದೃಷ್ಟ್ವಾ ಮಠೀಯಾಃ ಪ್ರೋಚುರೇವ ತಮ್॥**

ಈ ರೀತಿ ಪ್ರಾರ್ಥಿಸುವ ತಮ್ಮವರನ್ನು ನೋಡಿ ಶ್ರೀಗುರುಗಳು ಸುಮ್ಮನೆ ಇದ್ದರು. ಸುಮ್ಮನಿರುವ ಗುರುಗಳನ್ನು ನೋಡಿಯೇ (ಮೌನದಿಂದ ಅರ್ಥ ಅಂಗೀಕಾರವು ಎಂಬ ಗಾದೆಯ ಮಾತನ್ನನುಸರಿಸಿ) ಮಠದ ಜನರು ಶ್ರೀಯಾದ ವೇಂದ್ರರನ್ನು ಕುರಿತು ಮಾತನಾಡಿದರು.

**ಮೂಲರಾಮಂ ನ ದಾಸ್ಯಾಮೋ ಯಾದವೇಂದ್ರ ಕದಾಪಿ ತೇ।**
**ಇತ್ಯುಕ್ತೋ ಯಾದವೇಂದ್ರಸ್ತು ಶೀಘ್ರಂ ತಂಜಾಪುರಂ ಯಯೌ ॥೧೪॥**

ಹೇ ಯಾದವೇಂದ್ರರೇ! ನಿಮಗೆ ಎಂದಿಗೂ ಶ್ರೀಮೂಲರಾಮಪ್ರತಿಮೆ ಯನ್ನು ಕೊಡುವದಿಲ್ಲ, ಈ ರೀತಿ ಹೇಳಿಸಿಕೊಳ್ಳಲ್ಪಟ್ಟ ಶ್ರೀಯಾದವೇಂದ್ರರು ಬೇಗನೇ ತಂಜಾವೂರಿಗೆ ಹೊರಟರು.

**ತೂರ್ಣಮಾಯಾಹಿ ರಾಜನ್ ತ್ವಂ ಚೋತ್ತಮಂ ಮಾಮಕಂ ಮಠಂ।**
**ಆವಯೋಃ ಕಲಹಂ ಧೀಮನ್ ಕುರು ಶಾಂತಮಿತೀರಯತ್ ॥೧೫॥**

ಬುದ್ಧಿಶಾಲಿಗಳಾದ ಮಹಾರಾಜರೇ! ನನ್ನ ಸಂಬಂಧಿಯಾದ ಉತ್ತಮ ವಾದ ಮಠಕ್ಕೆ ಶೀಘ್ರವಾಗಿ ಬನ್ನಿ. ನಮ್ಮೀರ್ವರ (ರಾಘವೇಂದ್ರತೀರ್ಥರ ಮತ್ತು ನಮ್ಮ) ಜಗಳವನ್ನು ಪರಿಹರಿಸಿ.

**ಸ ರಾಜಾ ಯಾದವೇಂದ್ರಂ ಚ ನತ್ವಾ ಪೀಠೇ ನ್ಯವೇಶಯತ್।**
**ತೇನ ಸಾಕಂ ಪ್ರಭುಶ್ರೇಷ್ಠೋ ವಿಜಯೀಂದ್ರಮಠಂ ಯಯೌ ॥೧೬॥**

ಆ ಮಹಾರಾಜನಾದರೋ ಶ್ರೀಯಾದವೇಂದ್ರರನ್ನು ನಮಸ್ಕರಿಸಿ ಪೀಠದಲ್ಲಿ

ಕೂಡಿಸಿದನು. (ಅವರಿಂದ ಎಲ್ಲ ವಿಷಯಗಳನ್ನು ತಿಳಿದುಕೊಂಡು) ದೊರೆಯು, ಶ್ರೀಯಾದವೇಂದ್ರರಿಂದ ಕೂಡಿಕೊಂಡು ಶ್ರೀವಿಜಯೀಂದ್ರರ ಮಠಕ್ಕೆ ಪ್ರಯಾಣ ಮಾಡಿದನು.

**ಬದ್ಧಾಂಜಲಿಪುಟೋ ಭೂತ್ವಾ ರಾಘವೇಂದ್ರಂ ನನಾಮ ಸಃ ।**
**ತತೋ ರಾಜಾ ಮಠೀಯಾಂಸ್ತಾನಾಹೂಯ ವಿಚಚಾರ ಸಃ ॥೧೭॥**

ಅರಸನು ಕೈಜೋಡಿಸಿದವನಾಗಿ ಶ್ರೀರಾಘವೇಂದ್ರತೀರ್ಥರಿಗೆ ನಮಸ್ಕರಿಸಿದನು. ಆಮೇಲೆ ರಾಜನು ಆ ಮಠದವರನ್ನು ಕರೆದು ವಿಚಾರಿಸಿದನು.

**ಸುಧೀಂದ್ರೋ ರಾಘವೇಂದ್ರಾಯ ಮೂಲರಾಮಾದಿರಾಜ್ಯಕಂ ।**
**ಸ್ವಪ್ನೇ ಶ್ರೀಮೂಲರಾಮೇಣ ಬೋಧಿತೋ ದತ್ತವಾನ್ಮುದಾ ॥೧೮॥**

ಶ್ರೀಸುಧೀಂದ್ರತೀರ್ಥರು ಕನಸಿನಲ್ಲಿ ಶ್ರೀಮೂಲರಾಮದೇವರಿಂದ ಪ್ರೇರಿತರಾಗಿ ಶ್ರೀರಾಘವೇಂದ್ರತೀರ್ಥರಿಗೆ ಶ್ರೀಮೂಲರಾಮದೇವರ ಪ್ರತಿಮೆಯೇ ಮೊದಲಾಗಿ ವೇದಾಂತಸಾಮ್ರಾಜ್ಯವನ್ನು ಕೊಟ್ಟರು.

**ಇತ್ಯೂಚಿರೇ ಮಠೀಯಾಸ್ತೇ ರಾಜಾನಂ ನ್ಯಾಯವಾದಿನಂ ।**
**ತವ ರಾಜ್ಞಃಸಮಕ್ಷಂ ಭೋ ! ತತ್ಸರ್ವಂ ಸಮಜಾಯತ ॥೧೯॥**

ಮಹಾರಾಜರೇ ! ಅರಸರಾದ ತಮ್ಮ ಸಮಕ್ಷಮದಲ್ಲಿಯೇ ಅದೆಲ್ಲವೂ ಆಯಿತು, ಎಂದು ಆ ಮಠದವರು ನ್ಯಾಯವಾದಿಯಾದ ರಾಜನಿಗೆ ಹೇಳಿದರು.

**ಏವಮುಕ್ತೋ ಯಾದವೇಂದ್ರಂ ವಿಚಾರಂ ಕೃತವಾಂಸ್ತತಃ ।**
**ಯಾದವೇಂದ್ರ ಯತಿಶ್ರೇಷ್ಠ ! ಪ್ರೋಚ್ಯತಾಂ ಭವತಾ ತ್ವಿತಿ ॥೨೦॥**

ಈ ರೀತಿ ಹೇಳಿಸಿಕೊಳ್ಳಲ್ಪಟ್ಟ ಅರಸನು, ಆಮೇಲೆ ಯತಿಶ್ರೇಷ್ಠರಾದ ಯಾದವೇಂದ್ರರೇ ! ನಿಮ್ಮಿಂದ ಹೇಳಲ್ಪಡಲಿ ಎಂದು (ನಿಮ್ಮ ಅಭಿಪ್ರಾಯವನ್ನು ತಿಳಿಸಿ ಎಂದು) ಯಾದವೇಂದ್ರರನ್ನು ಕುರಿತು ವಿಚಾರವನ್ನು ಮಾಡಿದನು.

**ಜ್ಯೇಷ್ಠತ್ವಾನ್ಮಾಮಕಂ ಸರ್ವಂ ತಸ್ಮಾನ್ಮೇ ದಾಸ್ಯತಾಂ ಪ್ರಭೋ !**
**ಇತ್ಯೂಚೇ ಯಾದವೇಂದ್ರಾರ್ಯೋ ನೃಪಂ ಚಾಪಕ್ಷಪಾತಿನಂ ॥೨೧॥**

ಪ್ರಭುಗಳೇ ! ಆಶ್ರಮಜ್ಯೇಷ್ಠರಾದಕಾರಣ ನನ್ನದಾದ ಎಲ್ಲವನ್ನು ನನಗೆ ಕೊಡಿಸೋಣವಾಗಲಿ ಎಂದು ಶ್ರೀಯಾದವೇಂದ್ರಾಚಾರ್ಯರು ಪಕ್ಷಪಾತವಿಲ್ಲದ ರಾಜನನ್ನು ಕುರಿತು ಹೇಳಿದರು.

**ರಾಜಾ ಕ್ಷಣಂ ಸಮಾಲೋಚ್ಯ ಯಾದವೇಂದ್ರಮುವಾಚ ಸಃ ।**
**ಏತಾವದೇವ ಮೇ ಭಾತಿ ಕ್ರಿಯತಾಂ ಹಿ ಯಥಾ ಸುಖಮ್ ॥೨೨॥**

ಆ ತಂಜಾವೂರುದೊರೆಯು ಕ್ಷಣಕಾಲ ಯೋಚಿಸಿ, ಯಾದವೇಂದ್ರರನ್ನು ಕುರಿತು ಹೇಳಿದನು. ನನಗೆ ಇಷ್ಟುಮಾತ್ರ ತೋರುತ್ತದೆ, ಹೇಗೆ ಸುಖವೋ (ಯೋಗ್ಯವೋ) ಹಾಗೆ ಮಾಡಲ್ಪಡಲಿ.

**ಯಾದವೇಂದ್ರೋ ದ್ವಾಪರೇ ತು ಧೇನೂನಾಂ ಪಾಲಕೋಽಭವತ್ ।**
**ತ್ರೇತಾಯಾಂ ರಾಘವೇಂದ್ರಸ್ತು ಸಾಮ್ರಾಜ್ಯಂ**
**ಪಾಲಯನ್ ಬಭೌ ॥೨೩॥**

ದ್ವಾಪರಯುಗದಲ್ಲಾದರೋ ಯಾದವಶ್ರೇಷ್ಠನಾದ ಶ್ರೀಕೃಷ್ಣನು ಆಕಳುಗಳ ರಕ್ಷಕನಾದನು. ತ್ರೇತಾಯುಗದಲ್ಲಿ ರಘುಕುಲಕ್ಕೆ ಒಡೆಯನಾದ ಶ್ರೀರಾಮ-ಚಂದ್ರನು ಸಾಮ್ರಾಜ್ಯವನ್ನು ಪಾಲಿಸುವವನಾದನು.

**ಗುರುದತ್ತಂ ಸರ್ವವಸ್ತು ದತ್ವಾ ಕುರು ತಪೋ ಮುದಾ ।**
**ರಾಘವೇಂದ್ರಸ್ತು ವೇದಾಂತಸಾಮ್ರಾಜ್ಯಂ ಪಾಲಯನ್ ವಸೇತ್ ॥೨೪॥**

ಗುರುಗಳಾದ ಶ್ರೀಸುಧೀಂದ್ರರಿಂದ ಕೊಡಲ್ಪಟ್ಟ ಎಲ್ಲವನ್ನು ಸಂತೋಷದಿಂದ ಕೊಟ್ಟು ತಪಸ್ಸನ್ನು ಮಾಡಿ. ಈ ಶ್ರೀರಾಘವೇಂದ್ರತೀರ್ಥರಾದರೋ ವೇದಾಂತಸಾಮ್ರಾಜ್ಯವನ್ನು ಪಾಲಿಸುವವರಾಗಿ ವಾಸಮಾಡಲಿ.

**ಅ. ವಿ. :**—ಅರಸನು ಉಭಯಪಕ್ಷದ ವಾಕ್ಯವನ್ನು ಕೇಳಿ, ಇಬ್ಬರೂ ಯತಿಶ್ರೇಷ್ಠರು, ಉಭಯರೂ ಶ್ರೀಸುಧೀಂದ್ರರಿಂದ ಆಶ್ರಮವನ್ನು ತೆಗೆದುಕೊಂಡವರು, ಈಗ ಯಾರಿಗೆ ಸಂಸ್ಥಾನವು ಸೇರತಕ್ಕದ್ದು ಎಂದು, ಹೇಗೆ ನಿರ್ಣಯಿಸಲಿ ಎಂದು ಸ್ವಲ್ಪವೇಳೆ ಯೋಚಿಸಿ, ನಿಮ್ಮ ನಿಮ್ಮ ಹೆಸರುಗಳನ್ನು ಹೇಳಿ ಎಂದು ಪ್ರಶ್ನಿಸಿದ ; ಈರ್ವರೂ ತಮ್ಮ ಹೆಸರುಗಳನ್ನು ಹೇಳಿದರು, ಆಗ ಕುಶಲಿಯಾದ

ರಾಜನು, ಈರೀತಿ ತೀರ್ಪನ್ನಿತ್ತನು :— ಯಾದವೇಂದ್ರ ಎಂದರೆ ಕೃಷ್ಣ: ಶ್ರೀಕೃಷ್ಣನು ಗೋಗಳನ್ನೂ ಪಾಲಿಸುತ್ತಾ ಅರಣ್ಯದಲ್ಲಿ ಸಂಚರಿಸಿದನು. ಶ್ರೀಕೃಷ್ಣ ನಿಗೆ ರಾಜ್ಯವಿಲ್ಲ. ಆದರಂತೆ ಯಾದವೇಂದ್ರರೇ! ನೀವು ವೇದಗಳನ್ನು ರಕ್ಷಿ ಸುತ್ತಾ (ಪಠಿಸುತ್ತಾ) ಭೂಮಿಯನ್ನು ಸಂಚರಿಸಿ. ಇನ್ನು ರಾಘವೇಂದ್ರ ಎಂದರೆ ಶ್ರೀರಾಮಚಂದ್ರ: ಶ್ರೀರಾಮನು ರಾಜ್ಯವನ್ನಾಳಿದನು. ಆದರಂತೆ ಶ್ರೀರಾಘ ವೇಂದ್ರರೇ! ನೀವು ವೇದಾಂತಸಾಮ್ರಾಜ್ಯವನ್ನಾಳಿ ಎಂದು ಹೇಳಿದನು.

**ಏವಂ ಶ್ರುತ್ವಾ ರಾಜವಾಕ್ಯಂ ವಿಸ್ಮಯಂ ಪ್ರಾಪ್ಯ ಭಿಕ್ಷುಕಃ।**
**ಗುರುದತ್ತಾಶೇಷವಸ್ತು ರಾಘವೇಂದ್ರಾಯ ದತ್ತವಾನ್ ॥೨೫॥**

ಶ್ರೀಯಾದವೇಂದ್ರರು ಈ ರಾಜನ ವಾಕ್ಯವನ್ನು ಕೇಳಿ ಆಶ್ಚರ್ಯವನ್ನು ಹೊಂದಿ, ಶ್ರೀಸುಧೀಂದ್ರತೀರ್ಥರಿಂದ ಕೊಡಲ್ಪಟ್ಟ ಎಲ್ಲ ವಸ್ತುವನ್ನೂ ಶ್ರೀರಾಘ ವೇಂದ್ರತೀರ್ಥರಿಗೆ ಕೊಟ್ಟರು.

**ಕೃಷ್ಣಾತೀರಂ ತತೋ ಗತ್ವಾ ಕಾಂಶ್ಚಿನ್ಮಾಸಾನ್ತತಾಪ ಸಃ।**
**ತತೋ ಬೃಂದಾವನಂ ಪ್ರಾಪ್ತಃ ತತ್ಸದ್ಯಾಪಿ ಪ್ರದೃಶ್ಯತೇ ॥೨೬॥**

ಶ್ರೀಯಾದವೇಂದ್ರರು, ಆಮೇಲೆ ಕೃಷ್ಣಾತೀರಕ್ಕೆ ಹೋಗಿ, ಕೆಲವು ತಿಂಗಳು ಗಳು ತಪಸ್ಗೈದರು. ಅನಂತರದಲ್ಲಿ ಬೃಂದಾವನವನ್ನೂ ಹೊಂದಿದರು. (ವೃಂದಾ ವನಸ್ಥರಾದರು) ಆ ವೃಂದಾನವು ಇಂದಿಗೂ (ಮುಡಮಾಲುಗ್ರಾಮದಲ್ಲಿ) ಕಾಣಲ್ಪಡುತ್ತದೆ.

**ತೇನೈವ ದತ್ತಸರ್ವಸ್ವೋ ರಾಘವೇಂದ್ರೋ ವಸನ್ ಮುದಾ।**
**ಕಂಭಘೋಣಂ ದೇವಯೋಗ್ಯಂ ಸಹಾತ್ಮೀಯೈರ್ಜನೈಸ್ತದಾ ॥೨೭॥**

ಶ್ರೀಯಾದವೇಂದ್ರರಿಂದಲೇ ಕೊಡಲ್ಪಟ್ಟ ಸರ್ವಸ್ವವುಳ್ಳ ಶ್ರೀರಾಘವೇಂದ್ರ ತೀರ್ಥರು, ಆಗ ತಮ್ಮ ಜನರಿಂದ ಕೂಡಿಕೊಂಡು, ದೇವತೆಗಳ ನಿವಾಸಕ್ಕೆ ಯೋಗ್ಯವಾದ ಕುಂಭಘೋಣದಲ್ಲಿ ಸಂತೋಷದಿಂದ ವಾಸಿಸಿದರು.

**ದಿನಾನಿ ಕತಿಚಿತ್ತತ್ರ ಸಂಸ್ಥಿತ್ವಾ ನಂತರಂ ಗುರುಃ।**
**ಸಹಾತ್ಮೀಯೈರ್ಯಯೌ ಕ್ಷೇತ್ರಶ್ರೇಷ್ಠ ಶಂಖಮುಖಾವಧಿ ॥೨೮॥**

ಶ್ರೀರಾಘವೇಂದ್ರಗುರುಗಳು ಆ ಕುಂಭಘೋಣದಲ್ಲಿ ಕೆಲವು ದಿನಗಳು ಸುಖದಿಂದಿದ್ದು ಆಮೇಲೆ ತಮ್ಮವರಿಂದ ಕೂಡಿಕೊಂಡು ಶ್ರೇಷ್ಠವಾದ **ಶಂಖ-ಮುಖವೆಂಬ** ಕ್ಷೇತ್ರದವರಿಗೂ (ಕ್ಷೇತ್ರಕ್ಕೆ) ಪಯಣಮಾಡಿದರು.

**ತತೋ ದಕ್ಷಿಣದಿಗ್ಭಾಗೇ ರಾಮಸೇತುಂ ಯಯೌ ಮುದಾ ।**
**ಮಧುರಾಖ್ಯಂ ತತೋ ಗತ್ವಾ ಜಿಗಾಯಾದ್ವೈತವಾದಿನಃ ॥೨೯॥**

ಅನಂತರದಲ್ಲಿ ದಕ್ಷಿಣದಿಕ್ಕಿನಲ್ಲಿ ರಾಮಸೇತು ಎಂಬ ಕ್ಷೇತ್ರಕ್ಕೆ ಸಂತಸದಿಂದ ತೆರಳಿದರು. ಅಲ್ಲಿಂದ ಮಧುರಾ ಎಂಬ ಪಟ್ಟಣಕ್ಕೆ ಹೋಗಿ ಅದ್ವೈತವಾದಿಗಳನ್ನು ಗೆದ್ದರು.

**ತತೋ ನಾಮಗಿರಿಂ ಗತ್ವಾ ನೃಹರಿಂ ಪ್ರಣನಾಮ ಸಃ ।**
**ಸುಶ್ರೀರಂಗಂ ತತೋ ಗತ್ವಾ ತತ್ರ ಶಿಷ್ಯಾನವಾಚಯತ್ ॥೩೦॥**

ಶ್ರೀರಾಘವೇಂದ್ರತೀರ್ಥರು ಅಲ್ಲಿಂದ **ನಾಮಗಿರಿ** ಎಂಬ ಕ್ಷೇತ್ರಕ್ಕೆ ಹೋಗಿ ಶ್ರೀನರಹರಿಯನ್ನು ನಮಿಸಿ, ಅಲ್ಲಿಂದ ಉತ್ತಮವಾದ ಶ್ರೀರಂಗಕ್ಷೇತ್ರಕ್ಕೆ ಹೋಗಿ, ಅಲ್ಲಿ ಶಿಷ್ಯರುಗಳಿಗೆ (**ಪ್ರಮಾಣಪದ್ಧತಿ** ಎಂಬ ಗ್ರಂಥದಿಂದ ಪ್ರಾರಂಭಿಸಿ, **ಚಂದ್ರಿಕಾ** ಎಂಬ ಗ್ರಂಥದವರೆವಿಗೆ) ಪಾಠವನ್ನು ಹೇಳಿದರು.

**ತತೋ ಭಲ್ಲಪುರೀಂ ಗತ್ವಾ ತೋಷಯಿತ್ವಾ ಮಹಾಪ್ರಭುಂ ।**
**ಭೈರವಂ ವೀರಭದ್ರಂ ಚ ಜಿತ್ವಾ ಗ್ರಾಮಂ ಸಲಬ್ಧವಾನ್ ॥೩೧॥**

ಶ್ರೀರಾಘವೇಂದ್ರತೀರ್ಥರು ಅಲ್ಲಿಂದ ಭಲ್ಲಪುರಿ (ಬಾಣಾವರ) ಎಂಬ ಪಟ್ಟಣಕ್ಕೆ ಹೋಗಿ, ಭೈರವ ಮತ್ತು ವೀರಭದ್ರ ಎಂಬುವರನ್ನು ವಾದದಲ್ಲಿ ಗೆದ್ದು, ಗ್ರಾಮಾಧಿಕಾರಿಯನ್ನು ಸಂತೋಷಪಡಿಸಿ, ಗ್ರಾಮವನ್ನು ಹೊಂದಿದರು (ಗ್ರಾಮಾಧಿಕಾರಿಯು ಸಂತೋಷಪಟ್ಟು ಶ್ರೀರಾಯರಿಗೆ ಗ್ರಾಮವನ್ನು ಕಾಣಿಕೆಯಾಗಿ ಕೊಟ್ಟನು).

**ಸುಬ್ರಹ್ಮಣ್ಯಂ ತತಃ ಕ್ಷೇತ್ರಂ ರೌಪ್ಯಪೀಠಪುರಂ ಗತಃ ।**
**ತತ್ರ ಗ್ರಂಥಶ್ಚಂದ್ರಿಕಾಯಾಃ ಪ್ರಕಾಶಾಖ್ಯಃ ಕೃತೋ ಮುದಾ ॥೩೨॥**

ಭಲ್ಲಪುರಿಯಿಂದ ಸುಬ್ರಹ್ಮಣ್ಯ, ಉಡುಪಿ ಕ್ಷೇತ್ರಗಳಿಗೆ ಹೋಗಿ, ಶ್ರೀಉಡುಪಿ

ಕ್ಷೇತ್ರದಲ್ಲಿ, ಶ್ರೀವ್ಯಾಸರಾಜರಿಂದ ರಚಿಸಿದ **ಚಂದ್ರಿಕಾ** ಎಂಬ ಗ್ರಂಥಕ್ಕೆ **ಪ್ರಕಾಶ** ಎಂಬ ಹೆಸರುಳ್ಳ ಟಿಪ್ಪಣಿಯು ಹರ್ಷದಿಂದ ಮಾಡಲ್ಪಟ್ಟಿತು.

**ಸ ತಂತ್ರದೀಪಿಕಾಗ್ರಂಥಂ ನ್ಯಾಯಮುಕ್ತಾವಳೀಂ ತತಃ ।**
**ತತ್ರೈಕವತ್ಸರಂ ಸ್ಥಿತ್ವಾ ಗುರುಃ ಕೃಷ್ಣಮತೋಷಯತ್ ॥೩೩॥**

ಪ್ರಸಿದ್ಧರಾದ ಶ್ರೀರಾಘವೇಂದ್ರಗುರುಗಳು ಆನಂತರದಲ್ಲಿ ಆ ಉಡುಪಿ ಕ್ಷೇತ್ರದಲ್ಲಿ ಒಂದು ವರ್ಷ ವಾಸಮಾಡಿ, ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನರೂಪವಾದ **ತಂತ್ರದೀಪಿಕಾ** ಎಂಬ ಗ್ರಂಥವನ್ನು **ನ್ಯಾಯಮುಕ್ತಾವಳಿ** ಎಂಬ ಗ್ರಂಥವನ್ನು (ಮಾಡಿ) ಶ್ರೀಕೃಷ್ಣನನ್ನು ಸಂತೋಷಪಡಿಸಿದರು.

**ತತಶ್ಚೋತ್ತರದಿಗ್ಭಾಗೇ ಪಾಂಡುರಂಗಂ ಮುದಾ ಯಯೌ ।**
**ಕರವೀರಪುರಂ ಗತ್ವಾ ಶ್ರೀಮಲ್ಲಕ್ಷ್ಮೀಂ ನನಾಮ ಸಃ ॥೩೪॥**

ಶ್ರೀರಾಘವೇಂದ್ರತೀರ್ಥರು ಉತ್ತರದಿಕ್ಕಿನಲ್ಲಿ ಶ್ರೀಪಾಂಡುರಂಗನಿಂದ ಅಧಿಷ್ಠಿತವಾದ **ಪಂಡರೀಪುರಕ್ಕೆ** ಸಂತೋಷದಿಂದ ಪಯಣಮಾಡಿದರು. ಅಲ್ಲಿಂದ **ಕೊಲ್ಹಾಪುರಕ್ಕೆ** ಹೋಗಿ, ಶ್ರೀಲಕ್ಷ್ಮೀದೇವಿಗೆ ನಮಸ್ಕರಿಸಿದರು.

**ತತಃ ಕ್ಷೇತ್ರಂ ಜಯಾರ್ಯಸ್ಯ ಗತ್ವಾ ಟೀಕಾಃ ಪಪಾಠ ಸಃ ।**
**ಪಂಪಾಕ್ಷೇತ್ರಂ ತತೋ ಗತ್ವಾ ಸುಧೀಂದ್ರಾದೀನ್ ನನಾಮ ಸಃ ॥೩೫॥**

ಶ್ರೀರಾಘವೇಂದ್ರತೀರ್ಥರು ಕರವೀರಪಟ್ಟಣದಿಂದ ಶ್ರೀಜಯಾರ್ಯರ ಮಳಖೇಡಕ್ಕೆ ಹೋಗಿ, ಟೀಕೆಗಳನ್ನು ಪಾಠ ಹೇಳಿದರು. (ತತ್ವಪ್ರಕಾಶವೇ ಮೊದಲಾದ ಟೀಕಾಗ್ರಂಥಗಳ ಪಾಠವನ್ನು ಹೇಳಿದರು) ಅಲ್ಲಿಂದ ಪಂಪಾಕ್ಷೇತ್ರಕ್ಕೆ (ಹಂಪಿಗೆ) ಹೋಗಿ, ಶ್ರೀಸುಧೀಂದ್ರರೇ ಮೊದಲಾದ ಬೃಂದಾವನಸ್ಥಗುರುಗಳಿಗೆ ನಮಸ್ಕರಿಸಿದರು.

**ಯಾದವಾನಾಂ ಪುರಂ ಗತ್ವಾ ವೇಂಕಣ್ಣಂ ದೃಷ್ಟವಾನ್ ಗುರುಃ ।**
**ತಪ್ತಮುದ್ರಾಂಕಿತಂ ಕೃತ್ವಾ ಪ್ರೋಚೇ ತ್ವಂ ಮಾಂ ಸ್ಮರಾಪದಿ ॥೩೬॥**

ಶ್ರೀರಾಘವೇಂದ್ರಗುರುಗಳು ಯಾದವರ ಪಟ್ಟಣಕ್ಕೆ (ಆದವಾನಿಗೆ) ಹೋಗಿ,(ಬ್ರಾಹ್ಮಣಕುವರನಾದ) ವೆಂಕಣ್ಣನನ್ನು ನೋಡಿದರು. ತಪ್ತಮುದ್ರಾಂಕಿತನನ್ನು ಮಾಡಿ, ನೀನು ಆಪತ್ತಿನಲ್ಲಿ ನನ್ನನ್ನು ಸ್ಮರಿಸು ಎಂದು ಹೇಳಿದರು.

**ಅ. ವಿ. :—** ಶ್ರೀರಾಘವೇಂದ್ರತೀರ್ಥರು ಸಂಚಾರತ್ವೇನ ಆದವಾನಿಗೆ ಬಂದಕಾಲದಲ್ಲಿ, ಬ್ರಾಹ್ಮಣ ಬೃಂದವು ತಪ್ತಮುದ್ರಾಧಾರಣೆಯನ್ನು ಮಾಡಿಸಿ ಕೊಂಡು ಶ್ರೀಗುರುಗಳಿಗೆ ತಮ್ಮ ಶಕ್ತ್ಯನುಸಾರವಾಗಿ ಕಾಣಿಕೆಯನ್ನು ಸಲ್ಲಿಸು ತ್ತಿದ್ದರು. ಅಕ್ಷರಮಾಲೆಯನ್ನೂ ತಿಳಿಯದೇ ಇರುವ ದಡ್ಡನಾದ ವೆಂಕಣ್ಣನು ದೂರದಲ್ಲಿ ನಿಂತು ಇದೆಲ್ಲವನ್ನೂ ನೋಡುತ್ತಾ ತಾನುಕೂಡಾ ಅವರುಗಳಂತೆ ಮುದ್ರೆಯನ್ನು ಹಾಕಿಸಿಕೊಳ್ಳಬೇಕೆಂಬ ಆಶೆಯಿಂದ ಶ್ರೀಗುರುಗಳ ಸನಿಹಕ್ಕೆ ಬಂದು ಕೈಮುಗಿದು, ಸಂತೋಷದಿಂದ ಸ್ವಾಮಿಗಳೇ! ನಾನು ಬಡವ, ದಡ್ಡ, ಕಾಣಿಕೆಕೊಡುವ ಯೋಗ್ಯತೆ ಇಲ್ಲ, ಮುದ್ರೆ ಹಾಕಿಸಿಕೊಳ್ಳುವ ಆಶೆ ಇದೆ ಎಂದನು. ಅಪರೋಕ್ಷಜ್ಞಾನಿಗಳಾದ **ಶ್ರೀರಾಘವೇಂದ್ರತೀರ್ಥರು,** ವೆಂಕಣ್ಣನ ಯೋಗ್ಯತೆಯನ್ನರಿತು, ಈಗ ನಾವು ಮುದ್ರೆಯನ್ನು ಹಾಕುತ್ತೇವೆ. ಮುಂದೆ ಶ್ರೀಮೂಲರಾಮದೇವರು ಅನುಗ್ರಹಿಸಿದ ಕಾಲದಲ್ಲಿ ಕಾಣಿಕೆಯನ್ನು ಸಲ್ಲಿಸು ಎಂದು ಹೇಳಿ, ಮುದ್ರೆಯನ್ನೂ ಹಾಕಿ, ಆಪತ್ತು ಬಂದಾಗ ನಮ್ಮನ್ನು ಸ್ಮರಿಸು ಎಂದು ಆಜ್ಞಾಪಿಸಿದರು.

**ಗೋದಾವರೀಂ ತತೋ ಗತ್ವಾ ಪುರಂ ವಿಜಯಪೂರ್ವಕಂ।**
**ಜಿತ್ವಾ ಮಿಥ್ಯಾವಾದಿನಸ್ತು ಚಕ್ರೇ ಮುದ್ರಾಂಕಿನೋ ಗುರುಃ ॥೩೭॥**

ಆದವಾನಿಯಿಂದ ಗೋದಾವರಿ, ವಿಜಯನಗರಗಳಿಗೆ ಹೋಗಿ 'ಜಗತ್ತು ಸುಳ್ಳು' ಎಂಬ ವಾದಿಗಳನ್ನು ವಾದದಲ್ಲಿ ಗೆದ್ದು, ಶ್ರೀಗುರುಗಳು ಮುದ್ರಾಂಕಿತ ವುಳ್ಳವರನ್ನು ಮಾಡಿದರು.

**ಶ್ವೇತಾತಪತ್ರಂ ಲೇಭೇ ಸ ರಾಜಾನಂ ತೋಷಯಂಸ್ತತಃ।**
**ಕೃಷ್ಣಾತೀರಂ ತತೋ ಗತ್ವಾ ಕಾಂಶ್ಚಿನ್ಮಾಸಾನ್ನಿನಾಯ ಸಃ॥**
**ಅಣುಭಾಷ್ಯಸ್ಯ ಟೀಕಾಂ ಚ ತತ್ತೀರೇ ಕೃತವಾನ್ ಗುರುಃ ॥೩೮॥**

ಪ್ರಸಿದ್ಧರಾದ ಶ್ರೀರಾಘವೇಂದ್ರತೀರ್ಥರು ವಿಜಯನಗರದ ಅರಸನನ್ನು ಪಾಂಡಿತ್ಯದಿಂದ ಸಂತೋಷಪಡಿಸಿ ಶ್ವೇತಛತ್ರವನ್ನು ಪಡೆದರು. ಅಲ್ಲಿಂದ ಕೃಷ್ಣಾ ನದೀತೀರಕ್ಕೆ ಹೋಗಿ, ಕೆಲವು ತಿಂಗಳುಗಳನ್ನು ಕಳೆದರು. ಆ ಕೃಷ್ಣಾನದೀ ತೀರದಲ್ಲಿ ಅಣುಭಾಷ್ಯಕ್ಕೆ ಟೀಕಾವನ್ನು ಕೂಡ ಮಾಡಿದರು (ತತ್ವಮಂಜರೀ ಎಂಬ ಗ್ರಂಥವನ್ನು ಬರೆದರು).

ಸ್ವಸ್ಯೋತ್ಪತ್ತೇರ್ಹೇತುಭೂತಂ ವೇಂಕಟೇಶಂ ಗತಸ್ತತಃ ।
ದಿನಾನಿ ಕತಿಚಿತ್ತತ್ರ ಸೇವಾಂ ಚಕ್ರೇ ಹರೇರ್ಮುದಾ ॥೩೯॥

ಅಲ್ಲಿಂದ ತಮ್ಮ ಹುಟ್ಟುವಿಕೆಗೆ ಕಾರಣನಾದ ಶ್ರೀವೇಂಕಟೇಶನನ್ನು ಹೊಂದಿದರು (ಕೃಷ್ಣಾನದಿಯಿಂದ ತಿರುಪತಿಗೆ ಹೋದರು). ಅಲ್ಲಿ ಕೆಲವು ದಿನಗಳು ಸಂತೋಷದಿಂದ ಶ್ರೀಶ್ರೀನಿವಾಸನ ಸೇವೆಯನ್ನು ಮಾಡಿದರು.

ತತಃಕಾಂಚೀಪುರಂ ಗತ್ವಾ ವರದಂ ಚ ನನಾಮ ಸಃ ।
ಕಾಮಾಕ್ಷ್ಯಾದೀಂಶ್ಚ ತತ್ರೈವ ನನಾಮ ಶ್ರೀತ್ರಿವಿಕ್ರಮಂ ॥ ॥೪೦॥

ಆ ಶ್ರೀರಾಘವೇಂದ್ರತೀರ್ಥರು ತಿರುಪತಿಯಿಂದ ಕಾಂಚೀಪುರಕ್ಕೆ (ಕಂಚಿಗೆ) ಹೋಗಿ, ಶ್ರೀವರದರಾಜನಿಗೆ ನಮಸ್ಕರಿಸಿದರು ಮತ್ತು ಅದೇ ಊರಿನಲ್ಲಿಯೇ ಶ್ರೀಕಾಮಾಕ್ಷಿಯೇ ಮೊದಲಾದ ದೇವತೆಗಳನ್ನೂ, ಶ್ರೀತ್ರಿವಿಕ್ರಮದೇವರನ್ನೂ ನಮಿಸಿದರು.

ತತೋಽರುಣಾಚಲಂ ಗತ್ವಾ ವರಂ ವೃದ್ಧಾಚಲಂ ತತಃ ।
ಗತಃಶ್ರೀಗುರುವರ್ಯಃಸಃಶ್ರೀಮುಷ್ಣಂ ಕ್ರೋಡವಾಸಕಂ ॥೪೧॥

ಕಂಚಿಯಿಂದ ಅರುಣಾಚಲ, ಶ್ರೇಷ್ಠವಾದ ವೃದ್ಧಾಚಲಗಳಿಗೆ ಹೋಗಿ ಅಲ್ಲಿಂದ ಗುರುಶ್ರೇಷ್ಠರಾದ ಶ್ರೀರಾಘವೇಂದ್ರತೀರ್ಥರು ಶ್ರೀವರಾಹದೇವರಿಂದ ಅಧಿಷ್ಠಿತವಾದ ಶ್ರೀಮುಷ್ಣಕ್ಕೆ ಹೋದರು.

ಏವಂ ಕ್ಷೇತ್ರಸ್ಯ ಯಾತ್ರಾಂ ಸ ತ್ವಾತ್ಮೀಯೈಃಸಹಿತೋ ಗುರುಃ ।
ಕೃತ್ವಾ ತತಃಕುಂಭಘೋಣಂ ದೇವಾವಾಸ್ಯಂ ಯಯೌ ಮುದಾ ॥೪೨॥

ಗುರುಶ್ರೀರಾಘವೇಂದ್ರತೀರ್ಥರು, ಈ ರೀತಿಯಾಗಿ ಕ್ಷೇತ್ರದ ಯಾತ್ರಾವನ್ನು ತಮ್ಮವರಿಂದ ಕೂಡಿಕೊಂಡು ಮಾಡಿ, ಆಮೇಲೆ ದೇವತೆಗಳ ವಾಸಕ್ಕೆ ಯೋಗ್ಯವಾದ ಕುಂಭಘೋಣಕ್ಕೆ ಸಂತೋಷದಿಂದ ಪಯಣಮಾಡಿದರು.

ವಿದ್ವದ್ವರ್ಯೈಃಶಾಸ್ತ್ರಸಂಘೈಃಶ್ರೀಮದ್ಭಿಶ್ಚ ತಥಾಪರೈಃ ।
ಪರತತ್ವವಿಚಾರೇಣ ಕಾಲಂ ತತ್ರ ಸ ನೀತವಾನ್ ॥೪೩॥

ಶ್ರೀರಾಘವೇಂದ್ರತೀರ್ಥರು ಆ ಕುಂಭಘೋಣದಲ್ಲಿ ಉತ್ತಮ ವಿದ್ವಾಂಸರು

ಗಳಿಂದ, ಶಿಷ್ಯರ ಸಮೂಹದಿಂದ ಹಾಗೂ ಬೇರೆ ಪಂಡಿತರಿಂದಲೂ (ಕೂಡಿ ಕೊಂಡು) ಉತ್ತಮ ತತ್ವವಿಚಾರದಿಂದ ಕಾಲವನ್ನು ಕಳೆಯುತ್ತಿದ್ದರು.

**ಇಲ್ಲಿಂದ ಹತ್ತುಶ್ಲೋಕಗಳು ಶ್ರೀರಾಘವೇಂದ್ರತೀರ್ಥರ ದೈನಂದಿನದ ಕಾರ್ಯಕ್ರಮವನ್ನು ವರ್ಣಿಸುತ್ತವೆ.**

**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಚಕ್ರೇ ಸ್ನಾನಂ ಯತೀಶ್ವರಃ ।**
**ಆಹ್ನೀಕಂ ಚ ಸಮಾಪ್ಯಾಥ ಪಾಠಾರಂಭಂ ಚಕಾರ ಹಿ ॥೪೪॥**

ಯತಿಶ್ರೇಷ್ಠರಾದ ಶ್ರೀರಾಯರು ಬ್ರಾಹ್ಮೀಮುಹೂರ್ತದಲ್ಲೆದ್ದು, ಸ್ನಾನ ವನ್ನು ಮಾಡಿದರು (ಮಾಡಿ) ಆಹ್ನೀಕವನ್ನು ಮುಗಿಸಿ, ಆಮೇಲೆ ಪಾಠವನ್ನು ಆರಂಭಿಸುತ್ತಿದ್ದರು.

**ಮಧ್ಯಾಹ್ನೇ ಚ ಪುನಃಸ್ನಾನಂ ಕೃತ್ವಾ ಮಾಧ್ಯಾಹ್ನಿಕಂ ಗುರುಃ ।**
**ಹಿರಣ್ಮಯೇ ರಮ್ಯತಮೇ ಸ್ಥಾಪಯಾಮಾಸ ಮಂಟಪೇ ॥೪೫॥**

ಶ್ರೀರಾಘವೇಂದ್ರತೀರ್ಥರು, ಮಧ್ಯಾಹ್ನದಲ್ಲಿ ಸ್ನಾನವನ್ನು ಹಾಗೂ ಮಧ್ಯಾಹ್ನದ ಆಹ್ನೀಕವನ್ನೂ ಮಾಡಿ, ಅತಿಸುಂದರವಾದ ಬಂಗಾರಮಂಟಪ ದಲ್ಲಿ (ಮುಂದೆ ಹೇಳಿದ ಮೂರ್ತಿಗಳನ್ನು) ಕೂಡಿಸಿದರು.

**ಆದೌ ಶ್ರೇಷ್ಠಗುರುಧ್ಯಾತಂ ಲಕ್ಷ್ಮೀನಾರಾಯಣಾಹ್ವಯಮ್ ।**
**ಬ್ರಹ್ಮಾರ್ಚಿತಂ ಮೂಲರಾಮಂ ಸ್ಥಿತಂ ಗಜಪುರೇ ತತಃ ॥ ॥೪೬॥**

**ದಶಾವತಾರಪೀಠೇನ ಪೂರ್ಣಪ್ರಜ್ಞಕೃತಂ ಪುರಾ ।**
**ಶ್ರೀದಿಗ್ವಿಜಯರಾಮಂ ಚ ಶಿರಃಪಾದಸುದರ್ಶನಮ್ ॥೪೭॥**

**ಟೀಕಾರ್ಯೈರರ್ಚಿತಂ ದೇವಂ ಜಯರಾಮಾಭಿದಂ ಪ್ರಭುಂ ।**
**ವ್ಯಾಸೋಪಲಂ ವ್ಯಾಸದತ್ತಂ ದಕ್ಷಿಣಾವರ್ತವಾರಿಜೇ ॥೪೮॥**

**ವೈಕುಂಠವಾಸುದೇವಂ ಚ ನೀಲಾದೇವ್ಯಾರ್ಚಿತಂ ಪುರಾ ।**
**ಮಂಥಾನದಾಮಹಸ್ತಂ ಚ ಸ್ವೇನ ಧ್ಯಾತಂ ಹಿರಣ್ಮಯಂ ॥೪೯॥**

**ಸನ್ನಿಧೌ ವಿಜಯೀಂದ್ರಸ್ಯ ಪೂಜಾಂ ಚಕ್ರೇ ಗುರುಸ್ತ್ವಿತಿ ।**
**ತತಸ್ತೀರ್ಥಾದಿಕಂ ದತ್ವಾ ಸರ್ವೇಭ್ಯಃಸದ್ಗುರುರ್ಮುದಾ ॥೫೦॥**

ಮೊದಲು ಪರಮಗುರುಗಳಿಂದ ಧ್ಯಾನಿಸಲ್ಪಟ್ಟ ಶ್ರೀಲಕ್ಷ್ಮೀನಾರಾಯಣ ಎಂಬ ಹೆಸರುಳ್ಳ ಪ್ರತಿಮೆಯನ್ನೂ, ಆಮೇಲೆ ಶ್ರೀಚತುರ್ಮುಖಬ್ರಹ್ಮದೇವರಿಂದ ಪೂಜಿತವಾದ ಆನೇಗುಂದಿಯಲ್ಲಿದ್ದ ಶ್ರೀಮೂಲರಾಮದೇವರ ಪ್ರತಿಮೆಯನ್ನು—

ಪೂರ್ವದಲ್ಲಿ ಶ್ರೀಮಧ್ವಾಚಾರ್ಯರಿಂದ ಮಾಡಲ್ಪಟ್ಟ, ದಶಾವತಾರಪೀಠದಿಂದ (ಯುಕ್ತವಾದ) ತಲೆ ಮತ್ತು ಪಾದಗಳಲ್ಲಿ ಸುದರ್ಶನ ಉಳ್ಳ ಶ್ರೀದಿಗ್ವಿಜಯರಾಮದೇವರ ಪ್ರತಿಮೆಯನ್ನು—

ಶ್ರೀಟೀಕಾಚಾರ್ಯರಿಂದ ಪೂಜಿತನಾದ ಸ್ವಾಮಿಯಾದ ಶ್ರೀಜಯರಾಮ ಎಂದು ಹೆಸರುಳ್ಳ ದೇವರನ್ನೂ, ಶ್ರೀವೇದವ್ಯಾಸದೇವರಿಂದ ಕೊಡಲ್ಪಟ್ಟ ವ್ಯಾಸಮುಷ್ಟಿಯನ್ನೂ, ಬಲಮುರಿ ಶಂಖಗಳನ್ನು—

ಪೂರ್ವದಲ್ಲಿ (ಅಷ್ಟಮಹಿಷಿಯರಲ್ಲಿ ಓರ್ವಳಾದ) ನೀಲಾದೇವಿಯಿಂದ ಪೂಜಿತವಾದ ವೈಕುಂಠವಾಸುದೇವನ ಪ್ರತಿಮೆಯನ್ನು ಮತ್ತು ತಮ್ಮಿಂದ ಧ್ಯಾನಿಸಲ್ಪಟ್ಟ ಬಂಗಾರಮಯವಾದ ಕಡಗೋಲು ಹಗ್ಗ ಕೈಯಲ್ಲಿ ಉಳ್ಳ ಶ್ರೀಕೃಷ್ಣಪ್ರತಿಮೆಯನ್ನು—

ಶ್ರೀಗುರುಗಳು ಈರೀತಿ ಶ್ರೀವಿಜಯೀಂದ್ರತೀರ್ಥರ ಸನ್ನಿಧಾನದಲ್ಲಿ ಪೂಜೆಯನ್ನು ಮಾಡಿದರು. ಆಮೇಲೆ ಶ್ರೀರಾಘವೇಂದ್ರತೀರ್ಥರು ಎಲ್ಲರಿಗೆ ಸಂತೋಷದಿಂದ ತೀರ್ಥಾದಿಗಳನ್ನು ಕೊಟ್ಟು—

**ಭೋಜನಂ ಚ ಸಮಾಪ್ಯಾತ್ರ ವ್ಯಾಖ್ಯಾನಮುಕರೋತ್ಪ್ರಭುಃ ।**
**ಗುರುಶ್ರೀರಾಘವೇಂದ್ರಾರ್ಯಃ ಪುನಃಸ್ನಾನಂ ಸಮಾಚರನ್ । ॥೫೧॥**

**ಸಾಯಾಹ್ನಿಕಂ ಸಮಾಪ್ಯಾಥ ಸ್ವಾರ್ತಿಕ್ಯಂ ಕೃತವಾನ್ ಹರೇಃ ।**
**ಸ್ವಸ್ಯಾರ್ತಿಕ್ಯಂ ಕಾರಯಿತ್ವಾ ಗೃಹಿಣಾ ಪುರವಾಸಿನಾ ॥೫೨॥**

**ತತಃ ಶ್ರೀರಾಘವೇಂದ್ರಾರ್ಯೋ ಬ್ರಾಹ್ಮಣೇಭ್ಯೋಽಕ್ಷತಾನ್ ದದೌ ।**
**ದತ್ವಾ ಚಕ್ರೇ ಸರ್ವಶಾಸ್ತ್ರಸುತತ್ವಸ್ಯ ವಿಚಾರಣಮ್ ॥೫೩॥**

ಭೋಜನವನ್ನು ಮುಗಿಸಿ, ಗುರುಶ್ರೀರಾಘವೇಂದ್ರತೀರ್ಥರು ಮತ್ತು

ಶ್ರೀವಿಜಯೀಂದ್ರತೀರ್ಥರ ಸನ್ನಿಧಿಯಲ್ಲಿ ವ್ಯಾಖ್ಯಾನವನ್ನು ಮಾಡುತ್ತಿದ್ದರು ಸಾಯಂಕಾಲದಲ್ಲಿ ಪುನಃ ಸ್ನಾನವನ್ನು ಮಾಡಿ—

ಸಾಯಂಕಾಲದ ಆಹ್ನಿಕವನ್ನು ಮುಗಿಸಿ, ಶ್ರೀಶನಿಗೆ ಉತ್ತಮವಾದ ಮಂಗಳಾರತಿಯನ್ನು ಮಾಡಿ, ಆಮೇಲೆ ಪಟ್ಟಣಿಗರಾದ ಗೃಹಸ್ಥರಿಂದ ತಮಗೆ ಆರತಿಯನ್ನು ಮಾಡಿಸಿಕೊಂಡು (ಮಾಲಿಕೆಮಂಗಳಾರತಿ ಆದಮೇಲೆ)—

ಪೂಜ್ಯರಾದ ಶ್ರೀರಾಘವೇಂದ್ರತೀರ್ಥರು ಬ್ರಾಹ್ಮಣರುಗಳಿಗೆ ಮಂತ್ರಾಕ್ಷತೆಗಳನ್ನು ಕೊಟ್ಟು ಆಮೇಲೆ ಎಲ್ಲ ಶಾಸ್ತ್ರಗಳ ಉತ್ತಮ ತತ್ವಗಳ ವಿಚಾರಣೆಯನ್ನು ಮಾಡುತ್ತಿದ್ದರು.

**ಏವಂ ಕಾಂಶ್ಚಿತ್ಸಮಾಸ್ತತ್ರ ರಾಘವೇಂದ್ರಗುರುರ್ಮುದಾ |**
**ಶಿಷ್ಯಾನಾನಂದಯನ್ ಶ್ರೇಷ್ಠೋ ನಿನಾಯ ಶ್ರೀಕೃಪಾನಿಧಿಃ ||೫೪||**

ಕೃಪಾನಿಧಿಗಳಾದ ಶ್ರೀರಾಘವೇಂದ್ರಗುರುಸಾರ್ವಭೌಮರು ಈರೀತಿ ಶಿಷ್ಯರನ್ನು ಸಂತೋಷಪಡಿಸುವವರಾಗಿ, ಆ ಕುಂಭಘೋಣದಲ್ಲಿ ಸಂತೋಷದಿಂದ ಕೆಲವು ತಿಂಗಳುಗಳನ್ನು ಕಳೆದರು.

ಇತಿ ಶ್ರೀರಾಘವೇಂದ್ರಾಣುವಿಜಯೇ ತೃತೀಯಸ್ಸರ್ಗಃ ಸಮಾಪ್ತಃ ||
ಹೀಗೆ ಶ್ರೀರಾಘವೇಂದ್ರಾಣುವಿಜಯದಲ್ಲಿ ಮೂರನೆಯ ಸರ್ಗವು ಮುಗಿದುದು.

---

## ಚತುರ್ಥಃಸರ್ಗಃ—ನಾಲ್ಕನೆಯ ಸರ್ಗವು.

**ಏಕಸ್ಮಿನ್ ದಿವಸೇ ತತ್ರ ಜ್ಯೋತಿಃಶಾಸ್ತ್ರವಿಶಾರದಾಃ |**
**ಊಚಿರೇ ತ್ರಯ ಆಗತ್ಯ ಪರೀಕ್ಷಾ ಕ್ರಿಯತಾಂ ಗುರೋ ! ||೧||**

ಕುಂಭಘೋಣದಲ್ಲಿ (ಶ್ರೀಗಳವರು ಇರುವಾಗ) ಒಂದಾನೊಂದು ದಿನ, ಜ್ಯೋತಿಃಶಾಸ್ತ್ರದಲ್ಲಿ ನಿಪುಣರಾದ ಮೂವರು ಬಂದು ಶ್ರೀರಾಘವೇಂದ್ರಗುರುಗಳಿಗೆ (ನಮ್ಮನ್ನು) ಪರೀಕ್ಷಾಮಾಡೋಣವಾಗಲಿ (ಎಂದು) ಹೇಳಿದರು.

ತೇಷಾಂ ವಾಕ್ಯಂ ಗುರುಃಶ್ರುತ್ವಾ "ಜಾತಕಂ ಮಮ ಲಿಖ್ಯತಾಂ" |
ಇತ್ಯುಕ್ತ್ವಾ ತಾನ್ ಪೃಥಕ್ಚೈವ ಹ್ಯುಪವೇಶ್ಯ ತ್ವಪಾಠಯತ್ ||೨||

ಶ್ರೀರಾಘವೇಂದ್ರತೀರ್ಥರು ಅವರುಗಳ ವಾಕ್ಯವನ್ನು ಕೇಳಿ "ನನ್ನ ಜಾತಕವು ಬರೆಯಲ್ಪಡಲಿ" ಎಂದು ಹೇಳಿ ಆ ಜ್ಯೋತಿಷ್ಕರನ್ನು ಬೇರೆಬೇರೆಯಾಗಿಯೇ ಕೂಡಿಸಿ (ಶಿಷ್ಯರಿಗೆ) ಪಾಠವನ್ನು ಹೇಳುತ್ತಿದ್ದರು.

ಪಾಠಸ್ಯಾನಂತರಂ ವಿಪ್ರೈರಾಗತ್ಯ ಗುರುಸನ್ನಿಧಿಮ್ |
ಅಖಿಲಂ ಜಾತಕಂ ತೈಶ್ಚ ಸ್ಥಾಪಿತಂ ಪುರತೋ ಗುರೋಃ ||೩||

ಪಾಠವು ಮುಗಿದಮೇಲೆ ಶ್ರೀಗುರುಗಳ ಸನ್ನಿಧಿಗೆ ಬಂದು, ಮತ್ತು ಆ ಬ್ರಾಹ್ಮಣರಿಂದ ಬರೆಯಲ್ಪಟ್ಟ ಜಾತಕವು ಶ್ರೀಗುರುಗಳ ಮುಂದೆ ಇಡಲ್ಪಟ್ಟಿತು.

ಜಾತಕಾನಿ ಗೃಹೀತ್ವಾ ತು ರಾಘವೇಂದ್ರೋ ದದರ್ಶ ಸಃ |
ಪ್ರಥಮೇ ಜಾತಕೇ ತ್ವಸ್ಯ ಹ್ಯಾಯುರಬ್ದಶತಂ ತತಃ ||೪||

ಅನಂತರದಲ್ಲಿ ಪ್ರಸಿದ್ಧರಾದ ಶ್ರೀರಾಘವೇಂದ್ರತೀರ್ಥರು ಜಾತಕಗಳನ್ನು ತೆಗೆದುಕೊಂಡು ನೋಡಿದರು. ಮೊದಲನೆಯ ಜಾತಕದಲ್ಲಿ ಶ್ರೀಗುರುಗಳ ಆಯುಸ್ಸು ನೂರುವರ್ಷಗಳು ಎಂದು (ಇದ್ದಿತು).

ದ್ವಿತೀಯೇ ಜಾತಕೇ ಮತ್ವಾ ಆಯುರಬ್ದಶತತ್ರಯಮ್ |
ತೃತೀಯೇ ಜಾತಕೇ ಹ್ಯಾಯುರಬ್ದಸಪ್ತಶತಂ ತ್ವಿತಿ ||೫||

ಎರಡನೆಯ ಜಾತಕದಲ್ಲಿ ಮುನ್ನೂರು ವರ್ಷಗಳು ಆಯುಸ್ಸು, ಮೂರನೇ ಜಾತಕದಲ್ಲಾದರೋ ಏಳುನೂರು ವರ್ಷಗಳು ಆಯುಸ್ಸು ಎಂದು ತಿಳಿದು (ನೋಡಿ)—

ಆವಾಚಯದ್ಗುರುಶ್ರೇಷ್ಠೋ ಭಿನ್ನಭಿನ್ನಾರ್ಥಬೋಧಕಂ |
ಜ್ಯೋತಿರ್ವಿದಸ್ತು ತತ್ರಸ್ಥೈರ್ಜಾತಕಾರ್ಥೋ ವಿವಿಚ್ಯತಾಂ ||೬||

ಇತ್ಯುಕ್ತ್ವಾ ಗಣಕಾಸ್ತತ್ರ ಬದ್ಧಾಂಜಲಿಪುಟಾ ದೃಢಮ್ |
ಜ್ಯೋತಿಶ್ಶಾಸ್ತ್ರಾನುಸಾರೇಣಾಸ್ಮಾಭಿರ್ಗಣಿತಮೇವ ಭೋ ||೭||

ಶ್ರೇಷ್ಠಗುರುಗಳಾದ ಶ್ರೀರಾಯರು ಬೇರೆಬೇರೆ ಅರ್ಥತಿಳಿಸುವದನ್ನು (ಬೇರೆ ಬೇರೆ ಆಯುಃಪ್ರಮಾಣವನ್ನು ಬರೆದ ಜಾತಕಗಳನ್ನು) ಓದಿಸಿದರು. ಆ ಸಭೆಯಲ್ಲಿರುವ ಜನರಿಂದ ಜ್ಯೋತಿಷ್ಕರ ಜಾತಕದ ಅರ್ಥವು ಹೇಳಲ್ಪಡಲಿ.

ಈರೀತಿಯಾಗಿ ಹೇಳಿಸಿಕೊಳ್ಳಲ್ಪಟ್ಟ ಜ್ಯೋತಿಷ್ಕರು ಸಭೆಯಲ್ಲಿ ಗಟ್ಟಿಯಾಗಿ ಕೈಜೋಡಿಸಿದವರಾಗಿ, ಗುರುಗಳೇ! ನಮ್ಮಗಳಿಂದ ಜ್ಯೋತಿಶ್ಯಾಸ್ತ್ರಾನುಸಾರವಾಗಿಯೇ ಲೆಕ್ಕವು (ಮಾಡಲ್ಪಟ್ಟಿತು).

**ಇತ್ಯುಕ್ತ್ವಾ ಜನಸಂಘಂ ಚ ಪ್ರಣೇಮುಸ್ತೇ ಗುರೂತ್ತಮಮ್ ।**
**ತತಃಶ್ರೀರಾಘವೇಂದ್ರಾರ್ಯಃಛಾತ್ರೇಷು ಪ್ರೀತಿಮಾನ್ ಮುದಾ ॥೮॥**

ಹೀಗೆಂದು ಜನಸಮೂಹಕ್ಕೂ ಹೇಳಿ, ಅವರುಗಳು ಗುರುಶ್ರೇಷ್ಠರಿಗೆ ನಮಸ್ಕರಿಸಿದರು. ನಂತರ ಪೂಜ್ಯಶ್ರೀರಾಘವೇಂದ್ರರು ಶಿಷ್ಯರುಗಳಲ್ಲಿ ಪ್ರೀತಿಯುಳ್ಳವರಾಗಿ ಸಂತಸದಿಂದ —

**ಮಯೋಚ್ಯತೇ ಹ್ಯಭಿಪ್ರಾಯಃ ಶ್ರೂಯತಾಮುಕ್ತವಾನಿತಿ**
**ಪ್ರಥಮೇನ ಬ್ರಾಹ್ಮಣೇನ ಲಿಖಿತಂ ಜಾತಕಂ ಮಮ ।**
**ಆಯುರಬ್ದಶತಂ ಯತ್ತು ಗಾತ್ರದೃಷ್ಟಿವಿವಕ್ಷಯಾ ॥೯॥**

ನನ್ನಿಂದ ಅಭಿಪ್ರಾಯವು ಹೇಳಲ್ಪಡುತ್ತದೆ, ಕೇಳಲ್ಪಡಲಿ (ಎಂದು ಹೇಳಿದರು) —

ಮೊದಲನೆಯ ಬ್ರಾಹ್ಮಣನಿಂದ ನನ್ನ ಯಾವ ಆಯುಸ್ಸು ನೂರುವರ್ಷವು (ಎಂದು) ಜಾತಕದಲ್ಲಿ ಬರೆಯಲ್ಪಟ್ಟಿತೋ (ಅದು) ದೇಹದ ದೃಷ್ಟಿಯಿಂದ---

**ಲಿಖಿತಂ ಯದ್ದ್ವಿತೀಯೇನ ಟಿಪ್ಪಣೀನಾಂ ವಿವಕ್ಷಯಾ ।**
**ಮದ್ಗ್ರಂಥಾನಾಂ ಪ್ರಚಾರಸ್ತು ವರ್ತತೇಽಬ್ದಶತತ್ರಯಮ್ ॥೧೦॥**

ಎರಡನೆಯ ಜ್ಯೋತಿಷ್ಕನಿಂದ ಬರೆಯಲ್ಪಟ್ಟದ್ದು ಟಿಪ್ಪಣಿಗಳ ವಿವಕ್ಷೆಯಿಂದ, ನನ್ನಿಂದ ರಚಿತವಾದ ಗ್ರಂಥಗಳ ಪ್ರಚಾರವು ಮುನ್ನೂರುವರ್ಷಗಳು ಇರುತ್ತದೆ.

**ದೈವಜ್ಞೇನ ತೃತೀಯೇನ ಲಿಖಿತಂ ಜಾತಕಂ ಚ ಯತ್ ।**
**ಅಬ್ದಸಪ್ತಶತಂ ತಚ್ಚ ವೃಂದಾವನವಿವಿಕ್ಷಯಾ ॥೧೧॥**

ಮೂರನೆಯ ಜ್ಯೋತಿಷ್ಕನಿಂದ ಏಳುನೂರು ವರ್ಷವು (ಎಂದು) ಜಾತಕವು ಬರೆಯಲ್ಪಟ್ಟಿತೋ ಅದು ವೃಂದಾವನದ ವಿವಿಕ್ಷೆಯಿಂದ—

**ಮಮ ವೃಂದಾವನೇ ವಾಸೋ ವರ್ಷಸಪ್ತಶತಾವಧಿಃ ।**
**ಇತ್ಯುಕ್ತ್ವಾ ತಾನ್ ಮಾನಯಿತ್ವಾ ಪ್ರೇಷಯಾಮಾಸ ಸದ್ಗುರುಃ ॥೧೨॥**

ನನ್ನ ವಾಸವು ವೃಂದಾವನದಲ್ಲಿ ಏಳುನೂರು ವರ್ಷಗಳ ವರೆಗೆ, ಎಂದು ಹೇಳಿ, ಶ್ರೀಗುರುಶ್ರೇಷ್ಠರು ಆ ಜ್ಯೋತಿಷ್ಕರನ್ನು ಸನ್ಮಾನಿಸಿ ಕಳಿಸಿದರು.

ಅ. ವಿ. :— ಒಂದಾನೊಂದು ದಿನ, ಮೂವರು ಜ್ಯೋತಿಷ್ಕರು ಶ್ರೀಗುರುಗಳ ಸನ್ನಿಧಿಯಲ್ಲಿ ಬಂದು ಅವರ ಅಪ್ಪಣೆಮೇರೆಗೆ ಬೇರೆಬೇರೆಕುಳಿತು ಶ್ರೀರಾಯರ ಜಾತಕವನ್ನು ಬರೆದು ಮುಂದಿರಿಸಿದರು. ಮೂವರೂ ಒಂದೇ ರೀತಿಯಾಗಿ ಬರೆದಿದ್ದು, ಆಯುಃಪ್ರಮಾಣದಲ್ಲಿ ಮಾತ್ರ ಒಬ್ಬರು ೧೦೦ವರ್ಷ, ಇನ್ನೊಬ್ಬರು ೩೦೦ವರ್ಷ, ಮಗದೊಬ್ಬರು ೭೦೦ವರ್ಷ ಎಂದು ಬರೆದಿದ್ದರು. ಅದನ್ನು ಕೇಳಿದವರು ಚಕಿತರಾಗಲು ಅಪರೋಕ್ಷಜ್ಞಾನಿಗಳಾದ ಶ್ರೀಗುರುಸಾರ್ವಭೌಮರು ಸಭೆಯನ್ನು ಕುರಿತು ಇಂತೆಂದರು— ಮೂವರೂ ಸರಿಯಾಗಿಯೇ ಬರೆದಿದ್ದಾರೆ, ಮೊದಲನೆಯವರು ಜನರ ಕಣ್ಣಿಗೆ ಕಾಣುವ ಈ ಭೌತಿಕದೇಹದ ದೃಷ್ಟಿಯಿಂದ, ಎರಡನೆಯವರು ಬರೆದದ್ದು ನನ್ನ ಗ್ರಂಥದ ವಿಷಯದ ಬಗ್ಗೆ. (ಅಂದರೆ ೩೦೦ವರ್ಷಗಳಾದಮೇಲೆ ತಮ್ಮಿಂದ ರಚಿಸಿದ ಗ್ರಂಥಗಳ ಪಾಠಪ್ರವಚನವನ್ನು ಮಾಡುವವರು ಇಂದಿನಂತೆ ಸಿಕ್ಕುವದಿಲ್ಲ-ಅತಿವಿರಳ ಎಂದು ಅಭಿಪ್ರಾಯ) ೭೦೦ವರ್ಷವೆಂದು ಬರೆದವರ ದೃಷ್ಟಿ ಬೃಂದಾವನದ ಮಹಿಮೆಯನ್ನು ಕುರಿತು. ೭೦೦ವರ್ಷವಾದಮೇಲೆ ನಾವು ಭೂಲೋಕವನ್ನು ಬಿಟ್ಟು ನಮ್ಮ ಸ್ಥಾನಕ್ಕೆ ತೆರಳುವೆವು, ಆಗ ಬೃಂದಾವನದ ಮಹಿಮೆ ಕಡಿಮೆಯಾಗುವದು ಎಂದು ವಿವರಿಸಿದರು.

**ಕದಾಚಿದ್ರಾಘವೇಂದ್ರಾರ್ಯಮೌತ್ತರೀಯಾ ದ್ವಿಜಾಸ್ತ್ರಯಃ ।**
**ದಿದೃಕ್ಷವೋ ಕುಂಭಘೋಣಂ ಯಯುಸ್ತೇ ಗುರುಮಾನಸಾಃ ॥೧೩॥**

ಒಂದಾನೊಂದುದಿನ ಗುರುಗಳಲ್ಲೇ ಮನಸ್ಸುಳ್ಳ ಉತ್ತರದೇಶದ ಮೂರು

ಮುಂದೆ ಬ್ರಾಹ್ಮಣರು ಪೂಜ್ಯರಾದ ಶ್ರೀರಾಘವೇಂದ್ರತೀರ್ಥರನ್ನು ನೋಡುವ ಅಪೇಕ್ಷೆಯುಳ್ಳವರಾಗಿ ಕುಂಭಘೋಣಕ್ಕೆ ಹೋದರು.

**ಮಧ್ಯಮಾರ್ಗೇ ತ್ರಯಸ್ತೇಽಪಿ ಸುಪಕ್ವಾನ್ನಾಭಿಲಾಷಿಣಃ ।**
**ಪರಸ್ಪರಂ ಭಾಷಮಾಣಾಃಕಾವೇರೀಂ ಪ್ರಾಪುರಂಜಸಾ ॥೧೪॥**

ಒಳ್ಳೆಯ ಪಕ್ವಾನ್ನವನ್ನು ಅಪೇಕ್ಷಿಸಿದ ಆ ಮೂವರಾದರೋ ಮಾರ್ಗದ ಮಧ್ಯದಲ್ಲಿ ಪರಸ್ಪರ ಮಾತನಾಡುತ್ತಾ, ಶೀಘ್ರವಾಗಿ (ಕುಂಭಘೋಣದಲ್ಲಿರುವ) ಕಾವೇರೀನದಿಯನ್ನು ಹೊಂದಿದರು.

**ತತ್ರೈಕೋ ದ್ವಾರಪಾಲಶ್ಚ ಗುರೋರ್ವಸ್ತ್ರಂ ನದೀಂ ನಯನ್ ।**
**ನದ್ಯಂತಿಕೇ ಬ್ರಾಹ್ಮಣೋಽಸೌ ದದರ್ಶ ಬ್ರಾಹ್ಮಣತ್ರಯಂ ॥೧೫॥**

ಮಠದಲ್ಲಿ (ಇರುವ) ಓರ್ವ ದ್ವಾರಪಾಲಕನಾದರೋ ಶ್ರೀಗುರುಗಳ ವಸ್ತ್ರವನ್ನು (ಶಾಟಿಯನ್ನು) ನದಿಗೆ ಒಯ್ಯುವವನಾಗಿ, ನದೀತೀರದಲ್ಲಿ ಆ ಬ್ರಾಹ್ಮಣನು (ದ್ವಾರಪಾಲಕನು) ಮೂವರು ಬ್ರಾಹ್ಮಣರನ್ನು ಕಂಡನು.

**ತತೋ ದ್ವಿಜಾನ್ ಪ್ರತಿ ಸ್ಮಾಹ ಜಾತಂ ಯುಷ್ಮದಭೀಪ್ಸಿತಮ್ ।**
**ಏವಂ ವದನ್ ದ್ವಾರಪಾಲಃಸ್ತದ್ವಸ್ತ್ರಂ ಚ ಜಲೇಽಕ್ಷಿಪತ್ ॥೧೬॥**

ಅನಂತರದಲ್ಲಿ ಬ್ರಾಹ್ಮಣರನ್ನು ಕುರಿತು ಮಾತನಾಡಿದನು. ನಿಮ್ಮ ಮನದ ಬಯಕೆಯಂತೆಯೇ ಆಗಿದೆ ಎಂದು ಹೇಳುವವನಾಗಿ ದ್ವಾರಪಾಲಕನು ಶಾಟಿಯನ್ನು ನೀರಿನಲ್ಲಿ ಒಗೆದನು. (ನೆನೆಸಿದನು)

**ತತಶ್ಚೋತ್ತರದೇಶೀಯಾಃಪ್ರೋಚುಸ್ತೇ ದ್ವಾರಪಂ ಪ್ರತಿ ।**
**ಕಿಮಭೀಷ್ಟಂ ದ್ವಾರಪಾಲ! ವದಾಸ್ಮಾಕಂ ತ್ವಯೋದಿತಂ ॥೧೭॥**

ಆಮೇಲೆ ಆ ಉತ್ತರದೇಶದ ಬ್ರಾಹ್ಮಣರು ದ್ವಾರಪಾಲಕನನ್ನು ಕುರಿತು, ದ್ವಾರಪಾಲಕನೇ ! ನಿನ್ನಿಂದ ಹೇಳಲ್ಪಟ್ಟ ನಮ್ಮ ಅಭೀಷ್ಟವು ಏನು ? ಹೇಳು (ಎಂದು) ಕೇಳಿದರು.

**ವಸ್ತ್ರೇ ಕ್ಲಿನ್ನೇ ದ್ವಾರಪಾಲಃಕಿಮುಕ್ತಂ ಭೋ ದ್ವಿಜಾ ! ಮಯಾ ।**
**ವರ್ತಮಾನಂ ನ ಜಾನೇಽಹಂ ಭವಿಷ್ಯಂ ವಚ್ಮಿ ವಃಕಥಮ್ ॥೧೮॥**

ದ್ವಾರಪಾಲಕನು ವಸ್ತ್ರವನ್ನು ತೋರಿಯಿಸಿ ಇಟ್ಟಿರಲು, ಎಲೈ ಬ್ರಾಹ್ಮಣರೇ ! ನನ್ನಿಂದ ಏನು ಹೇಳಲ್ಪಟ್ಟಿತು, ಈಗಿನ (ವರ್ತಮಾನದ) ವಿಷಯವನ್ನೇ ನಾನು ತಿಳಿಯೆ, ಮುಂದಿನ ವಿಷಯವನ್ನು ನಿಮಗೆ ಹೇಗೆ ಹೇಳುವೆ —

**ಇತ್ಯುಕ್ತಾ ದ್ವಾರಪಾಲೇನ ತಚ್ಛ್ರುತ್ವಾ ಬ್ರಾಹ್ಮಣಾಸ್ತ್ರಯಃ ।**
**ಗುರುವಸ್ತ್ರಸ್ಯ ಮಾಹಾತ್ಮ್ಯಮಜ್ಞೇಯಮಿತಿ ಮೇನಿರೇ ॥೧೯॥**

ಈರೀತಿಯಾಗಿ ಹೇಳಲ್ಪಟ್ಟ ದ್ವಾರಪಾಲಕನಿಂದ ಮೂವರು ಬ್ರಾಹ್ಮಣರು ಅದನ್ನು (ಯಾವದನ್ನೂ ಅರಿಯೆ ಎನ್ನುವದನ್ನು) ಕೇಳಿ, ಶ್ರೀಗುರುಗಳ ವಸ್ತ್ರದ ಮಹಿಮೆಯು ತಿಳಿಯಲಸಾಧ್ಯವಾದದ್ದು ಎಂದು ತಿಳಿದರು.

**ರಾಘವೇಂದ್ರಂ ಯಯುರ್ವಿಪ್ರಾಸ್ತದ್ದರ್ಶನಕುತೂಹಲಾಃ ।**
**ಸಭಾಮಧ್ಯಗತಂ ದೃಷ್ಟ್ವಾ ನಮಶ್ಚಕ್ರುಸ್ತ್ರಯೋ ಮುದಾ ॥೨೦॥**

ಶ್ರೀಗುರುಗಳನ್ನು ನೋಡುವ ಕುತೂಹಲಿಗಳಾದ ಮೂರುಮಂದಿ ಬ್ರಾಹ್ಮಣರು (ಶ್ರೀಮಠಕ್ಕೆ) ಪ್ರಯಾಣಮಾಡಿದರು. ಸಭೆಯ ಮಧ್ಯದಲ್ಲಿರುವ ಶ್ರೀರಾಘವೇಂದ್ರಗುರುಗಳನ್ನು ನೋಡಿ, ಹರ್ಷದಿಂದ ನಮಸ್ಕರಿಸಿದರು.

**ಮಧ್ಯಾಹ್ನಕಾಲೇ ಭುಕ್ತ್ಯರ್ಥಂ ದ್ವಿಜೇಷೂಪವಿಶತ್ಸು ಸಃ ।**
**ದ್ವಾರಪಾಲಂ ಸಮಾಹೂಯ "ಪರಿವೇಷಯ ಪಾಯಸಮ್" ॥೨೧॥**

ಮಧ್ಯಾಹ್ನಕಾಲದಲ್ಲಿ ಭೋಜನದ ಸಲುವಾಗಿ ಬ್ರಾಹ್ಮಣರು ಕುಳಿತಿರಲು, ಶ್ರೀಗುರುಗಳು ದ್ವಾರಪಾಲಕನನ್ನು ಕರೆದು (ಉತ್ತರದೇಶದಿಂದ ಬಂದ ಮೊದಲು ಕುಳಿತ ಬ್ರಾಹ್ಮಣನಿಗೆ) ಪಾಯಸವನ್ನು (ಪರಮಾನ್ನವನ್ನು) ಬಡಿಸು.

**ಅನ್ಯಸ್ಯ ಚೌತ್ತರೀಯಸ್ಯ ಚಿತ್ರಾನ್ನಂ ಪರಿವೇಷಯ ।**
**ಅಪರಸ್ಯೌತ್ತರೀಯಸ್ಯ ಭಕ್ಷ್ಯಂ ತ್ವಂ ಪರಿವೇಷಯ ॥೨೨॥**

ಇನ್ನೊಬ್ಬ ಉತ್ತರದೇಶದ ಬ್ರಾಹ್ಮಣನಿಗೆ ಚಿತ್ರಾನ್ನವನ್ನು ಬಡಿಸು. ಮಗದೊಬ್ಬ ಉತ್ತರದೇಶದ ಬ್ರಾಹ್ಮಣನಿಗೆ ಭಕ್ಷ್ಯವನ್ನು (ಕಡುಬನ್ನು) ಬಡಿಸು (ಎಂದು ಹೇಳಿದರು).

**ಸ್ವಾಭಿಪ್ರಾಯಸುವೇತ್ತಾರಂ ಪ್ರಣೇಮುಸ್ತೇ ಗುರುಂ ವರಮ್ ।**
**ಪರೀಕ್ಷಾ ಯಾ ಕೃತಾಸ್ಮಾಭಿಃಕ್ಷಮ್ಯತಾಮಿತಿ ಪ್ರೋಚಿರೇ ॥೨೩॥**

ತಮ್ಮ ಅಭಿಪ್ರಾಯವನ್ನು ಚೆನ್ನಾಗಿ ತಿಳಿದ (ಸರಿಯಾಗಿ ತಿಳಿದ) ಪೂಜ್ಯ ಗುರುಗಳಿಗೆ, ಆ ಬ್ರಾಹ್ಮಣರು ನಮಸ್ಕರಿಸಿದರು. ನಮ್ಮಗಳಿಂದ ಯಾವ ಪರೀಕ್ಷಾ ಮಾಡಲ್ಪಟ್ಟಿತೋ (ಅದನ್ನು) ಕ್ಷಮಿಸೋಣವಾಗಲಿ ಎಂದು ವಿಜ್ಞಾಪಿಸಿ ಕೊಂಡರು (ಹೇಳಿದರು).

**ಹೇ ಬ್ರಾಹ್ಮಣಾ ! ಭಾವಿಕಾಲೇ ಹ್ಯರ್ಚಕಾ ಮೇ ಭವಿಷ್ಯಥ ।**
**ಇತಿ ಕಾರುಣಿಕಃಪ್ರೀತ್ಯಾ ದದೌ ತೇಭ್ಯೋ ವರಂ ಗುರುಃ ॥೨೪॥**

ಕರುಣಿಗಳಾದ ಶ್ರೀಗುರುಗಳು, ಎಲೈ ಬ್ರಾಹ್ಮಣರೇ ! ಮುಂದಿನ ಜನ್ಮ ದಲ್ಲಿ ನನ್ನ ಅರ್ಚಕರು (ಪೂಜಿಸುವವರು) ಆಗಿರಿ ಎಂದು ಆ ಬ್ರಾಹ್ಮಣರಿಗೆ ಪ್ರೀತಿ ಯಿಂದ ವರವನ್ನು ಕೊಟ್ಟರು.

**ಪಾದಪ್ರಕ್ಷಾಲನಕಾಲೇ ತು ಜಲಾನಯನಕೋ ದ್ವಿಜಃ ।**
**ಅದಾತಾರಂ ವೇತನಸ್ಯ ರಾಘವೇಂದ್ರಂ ಸಮಬ್ರವೀತ್ ॥೨೫॥**

ಮಠದಲ್ಲಿ ನೀರನ್ನು ತರುವ ಬ್ರಾಹ್ಮಣನು (ಒಂದಾನೊಂದು ದಿನ) ಸಂಬಳವನ್ನು, ಕೊಡದೇ ಇರುವ ಶ್ರೀರಾಘವೇಂದ್ರಗುರುಗಳನ್ನು ಕುರಿತು ಕಾಲನ್ನು ತೊಳೆದುಕೊಳ್ಳುವ ಸಮಯದಲ್ಲಿ ವಿನಯದಿಂದ ಮಾತನಾಡಿದನು.

**ಶ್ರೀಗುರೋ! ರಾಘವೇಂದ್ರಾರ್ಯ! ವೇತನಂ ಮಮ ದೀಯತಾಂ ।**
**ವಿವಾಹಾರ್ಥಂ ಗಮಿಷ್ಯಾಮಿ ಮದ್ಗ್ರಾಮಂ ಬಂಧುಸಂಯುತಂ ॥೨೬॥**

ಗುರುಗಳಾದ ಪೂಜ್ಯಶ್ರೀರಾಘವೇಂದ್ರರೇ ! ನನ್ನ ಸಂಬಳವನ್ನು ಕೊಡೋಣ ವಾಗಲಿ. ಬಂಧುಗಳಿಂದ ಕೂಡಿದ ನನ್ನ ಊರಿಗೆ (ನನ್ನ) ಮದುವೆಯ ಉದ್ದಿಶ್ಯ ಹೋಗುವೆನು.

**ಇತ್ಯುಕ್ತೋ ರಾಘವೇಂದ್ರಾರ್ಯಃ ಪಾದಲೇಪನಮೃತ್ತಿಕಾಂ ।**
**ದ್ರವ್ಯಸ್ಥಾನೇ ದದೌ ತಸ್ಮೈ ತಾಮೇವಾಽಸೌ ಗೃಹೀತವಾನ್ ॥೨೭॥**

ಈ ರೀತಿ ಪ್ರಾರ್ಥಿಸಲ್ಪಟ್ಟ ಶ್ರೇಷ್ಠಶ್ರೀರಾಘವೇಂದ್ರರು ಆ ನೀರಿನವನಿಗೆ

ದ್ರವ್ಯಸ್ಥಾನದಲ್ಲಿ (ಸಂಬಳದ ಬದಲು) ಕಾಲಿಗೆ ಹಚ್ಚಿಕೊಳ್ಳಲು ತಂದ ಮಣ್ಣನ್ನು ಕೊಟ್ಟರು. ಆ ಬ್ರಾಹ್ಮಣನು ಆ ಮಣ್ಣನ್ನೇ ತೆಗೆದುಕೊಂಡನು.

**ತತಃಕಿಂಚಿತ್ಸುರಂ ಗತ್ವಾ ಗೃಹಸ್ಥಸ್ಯ ಗೃಹಂ ಯಯೌ।**
**ತದ್ಗೃಹಸ್ಥಸ್ಯ ಪತ್ನೀ ತು ಪ್ರಾತಃಪ್ರಸುಷುವೇ ಸುತಮ್ ||೨೮||**

ಅನಂತರದಲ್ಲಿ (ಅಲ್ಲಿಂದ ತಮ್ಮ ಊರಿಗೆ ಹೊರಟನು.) ದಾರಿಯಲ್ಲಿ ಒಂದು ಊರಿಗೆ ಹೋಗಿ (ರಾತ್ರಿಯಾದ ಪ್ರಯುಕ್ತ) ಓರ್ವ ಗೃಹಸ್ಥನ ಮನೆಗೆ ಹೋದನು. ಆ ಗೃಹಸ್ಥನ ಹೆಂಡತಿಯು ಅಂದು ಬೆಳಿಗ್ಗೆ ಗಂಡು ಮಗುವನ್ನು ಪ್ರಸವಿಸಿದ್ದಳು.

**ವೇದಿಕಾಯಾಂ ತಸ್ಯ ರಾತ್ರೌ ನಿದ್ರಾಂ ತು ಪ್ರಾಪ್ತವಾನ್ ದ್ವಿಜಃ।**
**ಬ್ರಹ್ಮರಾಕ್ಷಸ ಆಗತ್ಯ 'ಮಾರ್ಗಂ ದೇಹೀತಿ' ಚೋಕ್ತವಾನ್ || ||೨೯||**

ಬ್ರಾಹ್ಮಣನು (ರಾತ್ರಿಯಾದ ಪ್ರಯುಕ್ತ ಬಾಗಿಲನ್ನು ಹಾಕಿದ) ಆ ಗೃಹಸ್ಥನ ಮನೆಯ ಜಗಲಿಯಲ್ಲಿ ನಿದ್ರೆಯನ್ನು ಮಾಡಿದನು. ಆಗ ಆ ಬ್ರಹ್ಮರಾಕ್ಷಸನು ಬಂದು (ಒಳಗೆ ಹೋಗಲು) ದಾರಿಯನ್ನು ಕೊಡು ಎಂದು ಹೇಳಿದನು (ಕೇಳಿದನು).

**ಶಿರೋಧಃಸ್ಥಾಂ ಮೃತ್ತಿಕಾಂ ಚ ವಹ್ನಿಂ ಮತ್ವಾ ಹ್ಯಘೋಷಯನ್।**
**'ಆಗತೇಃಕಾರಣಂ ಕಿಂ? ತೇ' ತ್ವಿತಿ ಪ್ರೋಚೇ ಸ್ವಪನ್ ದ್ವಿಜಃ ||೩೦||**

ಮತ್ತು ಬ್ರಾಹ್ಮಣನ ತಲೆಯ ಅಡಿಯಲ್ಲಿರುವ ಮೃತ್ತಿಕೆಯನ್ನು ಬೆಂಕಿಯು ಎಂದು ತಿಳಿದು ಒದರಿದನು. (ಚೀರಿದನು). ಆಶ್ಚರ್ಯವು. ಮಲಗಿದ ಬ್ರಾಹ್ಮಣನು ನಿನ್ನ ಬರುವಿಕೆಯ ಕಾರಣವಾದರೂ ಏನು? ಎಂದು ಕೇಳಿದನು.

**ಆಗತಿಂ ಶಿಶುನಾಶಾಯ ವಿದ್ಧಿ ತ್ವಂ ಬ್ರಾಹ್ಮಣೋತ್ತಮ!**
**ಉಪಧಾನಸ್ಥಿತಂ ವಹ್ನಿಂ ಹೇತುಂ ಮೇ ಘೋಷಣಸ್ಯ ಚ ||೩೧||**

(ಆಗ ಬ್ರಹ್ಮರಾಕ್ಷಸನು ಹೇಳಿದನು) ಬ್ರಾಹ್ಮಣ ಶ್ರೇಷ್ಠನೇ! ಒಳಗೆ ಜನಿಸಿದ ಮಗುವಿನ ನಾಶಕ್ಕೋಸ್ಕರ (ನನ್ನ) ಬರುವಿಕೆಯನ್ನು ನೀನು ತಿಳಿ. (ಒಳಗೆ ಹುಟ್ಟಿರುವ ಮಗುವನ್ನು ಕೊಲ್ಲಲು ಬಂದಿರುವೆ) ಮತ್ತು ನಿನ್ನ ತಲೆದಿಂಬಿನ ಹತ್ತಿರವಿರುವ ಬೆಂಕಿಯು ನನ್ನ ಕಿರಿಚುವಿಕೆಗೆ ಕಾರಣವು.

**ಗೃಹಸ್ಥೋಽಸೌ ಪೂರ್ವಕಾಲೇ ಶಿಶೂನ್ ಮೇ ಹತವಾನ್ ದ್ವಿಜ ।**
**ತಸ್ಮಾದ್ಧೇತೋಃ ಶಿಶೂನಸ್ಯ ಹತವಾನ್ ಸಪ್ತಕಾನಹಮ್ ॥೩೨॥**

ಎಲೈ ಬ್ರಾಹ್ಮಣನೇ ಈ ಗೃಹಸ್ಥನು ಪೂರ್ವಕಾಲದಲ್ಲಿ (ಪೂರ್ವಜನ್ಮ ದಲ್ಲಿ) ನನ್ನ ಮಕ್ಕಳುಗಳನ್ನು ಕೊಂದನು. ಆ ಕಾರಣದಿಂದ ಬ್ರಾಹ್ಮಣನ (ಗೃಹಸ್ಥನ) ಏಳು ಕೂಸುಗಳನ್ನು ನಾನು ಕೊಂದೆನು.

**ಅಷ್ಟಮಂ ಚ ಹನಿಷ್ಯಾಮಿ ಶಿಶುಮೇನಂ ಮಹಾದ್ವಿಜ ।**
**ಇತ್ಯುಕ್ತ್ವಾ ಜಲವಾಹಂ ತಂ ಮಾರ್ಗಂ ದೇಹೀತ್ಯುವಾಚ ಸಃ ॥೩೩॥**

ಬ್ರಹ್ಮರಾಕ್ಷಸನು ಎಲೈ ವಿಪ್ರನೇ (ಈಗ) ಈ ಎಂಟನೆಯ ಕೂಸನ್ನು ಕೂಡ ಕೊಲ್ಲುವೆನು ಎಂದು ಹೇಳಿ (ಬಾಗಿಲ ಮುಂದೆ ಕುಳಿತ) ನೀರಿನ ಬ್ರಾಹ್ಮಣನನ್ನು ಕುರಿತು ದಾರಿಯನ್ನು ಕೊಡು ಎಂದು ಮಾತನಾಡಿದನು. (ಹೇಳಿದನು)

**ತದೈವ ಜಲವಾಹಸ್ತು ಗೃಹೀತ್ವಾ ಮೃತ್ತಿಕಾಂ ತತಃ ।**
**ಧೈರ್ಯಮಾಲಂಬ್ಯೋಪವಿಶ್ಯ ಸ್ವಸ್ಯೋತ್ಸಂಗೇ ನಿಧಾಯ ತಾಮ್ ॥೩೪॥**

ಆಗಲೇ ನೀರಿನವನಾದರೂ ಮೃತ್ತಿಕೆಯನ್ನು ತೆಗೆದುಕೊಂಡು, ಧೈರ್ಯ ವನ್ನು ಹೊಂದಿ ಕುಳಿತು (ಧೈರ್ಯದಿಂದ ಕುಳಿತು) ಆಮೇಲೆ ಆ ಮೃತ್ತಿಕೆಯನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು—

**ರೇ ರೇ ರಾಕ್ಷಸ ! ಮಾರ್ಗಂ ತೇ ನೋ ದಾಸ್ಯಾಮಿ ಕದಾಚನ ।**
**ಸ್ವಾಶ್ರಮಂ ಗಚ್ಛ ಡಿಂಭಂ ತ್ವಂ ಮಾ ಜಹೀತಿ ದ್ವಿಜೋಽವದತ್ ॥೩೫॥**

ಹೇ ರಾಕ್ಷಸನೇ ! ನಿನಗೆ ಎಂದಿಗೂ ದಾರಿಯನ್ನು ಕೊಡುವದಿಲ್ಲ, ನಿನ್ನ ಮನೆಗೆ ನಡೆ, ನೀನು ಬಾಲಕನನ್ನು ಕೊಲ್ಲಬೇಡ, ಎಂದು ಬ್ರಾಹ್ಮಣನು ಹೇಳಿದನು.

**ಭೋ ಬ್ರಾಹ್ಮಣ ! ಧನಂ ತುಭ್ಯಂ ದಾಸ್ಯಾಮಿ ತ್ವಂ ಯಥೇಚ್ಛಸಿ ।**
**ಶಿಶುಮಾರಣಕಾರ್ಯಸ್ಯ ವಿಘ್ನಂ ಮಾ ಕುರು ಸಾಂಪ್ರತಂ ॥೩೬॥**

ಹೇ ದ್ವಿಜನೇ ! ನೀನು ಎಷ್ಟು ಅಪೇಕ್ಷಿಸುವಿಯೋ ಅಷ್ಟು ಹಣವನ್ನು ನಿನಗೆ ಕೊಡುವೆ. ಈಗ ಮಗುವನ್ನು ಕೊಲ್ಲುವ ಕೆಲಸಕ್ಕೆ ತಡೆಯನ್ನು ಮಾಡಬೇಡ.

ಬ್ರಹ್ಮರಾಕ್ಷಸವಾಕ್ಯಂ ಚ ಶ್ರುತ್ವಾಹ ಸ್ಮ ಸ ತಂ ದ್ವಿಜಃ ।
ತಥಾಚೇದ್ಧನಕುಂಭಂ ಮೇ ದೇಹಿ ತ್ವಂ ಬ್ರಹ್ಮರಾಕ್ಷಸ ! ||೩೭||

ಆ ಬ್ರಾಹ್ಮಣನು ಬ್ರಹ್ಮರಾಕ್ಷಸನ ವಾಕ್ಯವನ್ನು ಕೇಳಿ, ಬ್ರಹ್ಮರಾಕ್ಷಸನೇ ! ಹಾಗಾದಪಕ್ಷದಲ್ಲಿ ನನಗೆ ಹಣದ ಕೊಡವನ್ನು (ಧನ ತುಂಬಿದ ಕೊಡವನ್ನು) ನೀನು ಕೊಡು (ಎಂದು) ಹೇಳಿದನು.

ಧನಂ ಗೃಹೀತ್ವಾ ಗಚ್ಛಾಮಿ ವಹ್ನಿನಾ ಸಹಿತಸ್ತತಃ ।
ಯಥೇಚ್ಛಂ ಕುರು ಕಾರ್ಯಂ ತ್ವಮಿತ್ಯುವಾಚ ದ್ವಿಜಸ್ತು ತಮ್ ||೩೮||

ಆಮೇಲೆ ಹಣವನ್ನು ತೆಗೆದುಕೊಂಡು ಬೆಂಕಿಯಿಂದ ಕೂಡಿದವನಾಗಿ (ಬೆಂಕಿಯಂತೆ ಕಾಣುವ ವೃತ್ತಿಕೆಯ ಗಂಟನ್ನೂ ತೆಗೆದುಕೊಂಡು) ಹೋಗುವೆ. ನೀನು ನಿನ್ನ ಇಚ್ಛೆಯಂತೆ ಕೆಲಸವನ್ನು ಮಾಡು, ಎಂದು ಬ್ರಾಹ್ಮಣನು ಬ್ರಹ್ಮರಾಕ್ಷಸನನ್ನು ಕುರಿತು ಹೇಳಿದನು.

ತದಾ ಗತ್ವಾ ದ್ರವ್ಯಪೂರ್ಣಕುಂಭಮಾದಾಯ ದತ್ತವಾನ್ ।
ಧನಪೂರ್ಣಂ ತಾಮ್ರಕುಂಭಂ ಸಮೀಪಂ ನೀತವಾನ್ ದ್ವಿಜಃ ||೩೯||

ಆಗ ಹೋಗಿ ಹಣದಿಂದ ತುಂಬಿದ ಕೊಡವನ್ನು ತಂದುಕೊಟ್ಟನು. ಬ್ರಾಹ್ಮಣನು ಧನದ ತಾಮ್ರದ ಕೊಡವನ್ನು ಸಮೀಪಕ್ಕೆ ತೆಗೆದುಕೊಂಡನು.

ಅನಂತರಂ ವೃತ್ತಿಕಾಂ ಚ ಗೃಹೀತ್ವಾ ಬ್ರಹ್ಮರಾಕ್ಷಸೇ ।
ಅಕ್ಷಿಪಜ್ಜ್ವಲನಾಹಸ್ತ್ರ ಗುರುಪಾದಂ ಸ್ಮರನ್ ಮುಹುಃ ||೪೦||

ಆಮೇಲೆ, ನೀರಿನವನಾದರೋ ಶ್ರೀಗುರುಗಳನ್ನು ಮತ್ತೂ ಮತ್ತೂ ನೆನೆದು ವೃತ್ತಿಕೆಯನ್ನು ರಾಕ್ಷಸನ ಮೇಲೆ ಎಸೆದನು.

ಸಿಂಹವದ್ಗರ್ಜನಂ ಕೃತ್ವಾ ಹಾಹಾಕಾರಃ ಕೃತಸ್ತದಾ ।
ಭೂಮೇರಾಕಾಶಪರ್ಯಂತಂ ರೂಪಂ ತೇನ ಧೃತಂ ಧ್ರುವಮ್ ||೪೧||

ಆಗ ರಾಕ್ಷಸನಿಂದ ಸಿಂಹದಂತೆ ಗರ್ಜನೆಯನ್ನು ಮಾಡಿ ಹಾಹಾಕಾರವು ಮಾಡಲ್ಪಟ್ಟಿತು. ದೊಡ್ಡದಾದ ರೂಪವೂ ತೆಗೆದುಕೊಳ್ಳಲ್ಪಟ್ಟಿತು.

ಮೃತ್ತಿಕಾಸ್ಪರ್ಶಮಾತ್ರೇಣ ಪೈಶಾಚೀಂ ತನುಮತ್ಯಜತ್ ।
ದಿವ್ಯದೇಹಂ ಗೃಹೀತ್ವಾ ಸ ದ್ವಿಜಂ ನತ್ವಾ ದಿವಂ ಯಯೌ ||೪೨||

ಆ ಬ್ರಹ್ಮರಾಕ್ಷಸನು ಮೃತ್ತಿಕಾಸ್ಪರ್ಶಮಾತ್ರದಿಂದ (ಮೃತ್ತಿಕೆ ತಗಲು ವಿಕೆಯ ಮಾತ್ರದಿಂದ) ಪಿಶಾಚದೇಹವನ್ನು ಬಿಟ್ಟನು, ಒಳ್ಳೇದೇಹವನ್ನು ಹೊಂದಿ ಬ್ರಾಹ್ಮಣನನ್ನು ನಮಸ್ಕರಿಸಿ, ಸ್ವರ್ಗವನ್ನು ಕುರಿತು ಪ್ರಯಾಣ ಮಾಡಿದನು.

ಏತತ್ಸರ್ವಂ ಗೃಹಸ್ಥೋಽಪಿ ಶ್ರುತ್ವಾ ವಿಸ್ಮಯಮಾಯಯೌ ।
ಗೃಹದ್ವಾರಮಪಾಕೃತ್ಯ ಜಲವಾಹಂ ನನಾಮ ಸಃ ||೪೩||

ಆ ಗೃಹಸ್ಥನಾದರೋ ಇದು ಯಾವತ್ತನ್ನೂ (ಬ್ರಾಹ್ಮಣ ಮತ್ತು ರಾಕ್ಷಸರ ಸಂವಾದವನ್ನು) ಕೇಳಿ ಆಶ್ಚರ್ಯವನ್ನು ಹೊಂದಿದನು. ಮನೆಯ ಬಾಗಿಲನ್ನು ತೆಗೆದು ನೀರಿನ ಬ್ರಾಹ್ಮಣನಿಗೆ ನಮಸ್ಕರಿಸಿದನು.

ಬ್ರಾಹ್ಮಣಾನ್ನಿಖಿಲಂ ವೃತ್ತಂ ಶ್ರುತ್ವಾತೀವ ಮುದಂ ಯಯೌ ।
ತತಸ್ತಸ್ಮೈ ಭ್ರಾತೃಕನ್ಯಾಂ ದತ್ವಾ ತುಷ್ಟೋ ಬಭೂವ ಹಿ ||೪೪||

ಅನಂತರದಲ್ಲಿ ಬ್ರಾಹ್ಮಣನಿಂದ ಎಲ್ಲ ವೃತ್ತಾಂತವನ್ನು ಕೇಳಿ ಅತ್ಯಂತ ಸಂತೋಷವನ್ನು ಹೊಂದಿದನು. ಆ ಬ್ರಾಹ್ಮಣನಿಗೆ ತಮ್ಮನ ಮಗಳನ್ನು ಕೊಟ್ಟು (ವಿವಾಹವನ್ನು ಮಾಡಿ) ಸಂತುಷ್ಟನಾದನು.

ತತೋ ದ್ವಿಜಃಸಭಾರ್ಯಸ್ಸನ್ ರಾಘವೇಂದ್ರಸ್ಯ ಸನ್ನಿಧಿಮ್ ।
ಪುನರ್ಗತ್ವಾ ಸರ್ವವೃತ್ತಂ ಜಗಾದ ಜನಸಂಸದಿ ||೪೫||

ಅನಂತರದಲ್ಲಿ ಬ್ರಾಹ್ಮಣನು ಹೆಂಡತಿಯಿಂದ ಕೂಡಿದವನಾಗಿ ಶ್ರೀರಾಘವೇಂದ್ರರ ಸನ್ನಿಧಿಗೆ ಹಿಂತಿರಿಗಿ ಹೋಗಿ, ಜನಸಮೂಹದಲ್ಲಿ ಎಲ್ಲ ವಿಷಯವನ್ನು ಹೇಳಿದನು.

ಪಿಶಾಚದತ್ತಕುಂಭಂ ತಂ ದ್ರವ್ಯಪೂರ್ಣಂ ಸ ದತ್ತವಾನ್ ।
ದೃಷ್ಟ್ವಾ ದ್ರವ್ಯಂ ರಾಘವೇಂದ್ರಃಪುನಸ್ತಸ್ಮೈ ಮುದಾ ದದೌ ||೪೬||

ಬ್ರಾಹ್ಮಣನು ಪಿಶಾಚಿಯಿಂದ ಕೊಡಲ್ಪಟ್ಟ ಹಣದಿಂದ ತುಂಬಿದ ಆ ಕೊಡ

ವನ್ನು ( ಶ್ರೀಗುರುಗಳಿಗೆ ) ಕೊಟ್ಟನು. ಶ್ರೀರಾಘವೇಂದ್ರತೀರ್ಥರು ಹಣ ವನ್ನು ನೋಡಿ, ಸಂತೋಷದಿಂದ ಮತ್ತು ಆ ನೀರಿನ ಬ್ರಾಹ್ಮಣನಿಗೇ ಕೊಟ್ಟರು. (ಶ್ರೀಗುರುಗಳಿಂದ ಕೊಡಲ್ಪಟ್ಟ ವೃತ್ತಿಕೆಯಿಂದ ದೊರೆತ ಹಣ, ನನ್ನ ವಿವಾ-ಹವೂ ಆಯಿತು. ಈ ಹಣ ಶ್ರೀಗುರುಗಳಿಗೆ ಸಲ್ಲತಕ್ಕದ್ದು ಎಂದು ಶ್ರೀರಾಯರಿಗೆ ಕೊಟ್ಟನು. ಶ್ರೀಗುರುಗಳು ಅವನ ಸತ್ಯತೆಯನ್ನು ಕಂಡು ಹರ್ಷದಿಂದ ಆತನಿಗೇ ಹಿಂತಿರುಗಿಸಿದರು.)

**ದ್ರವ್ಯಂ ಗೃಹೀತ್ವಾ ವಿಪ್ರಸ್ತು ಯಯೌ ಗ್ರಾಮಂ ಸಭಾರ್ಯಕಃ ।**
**ಗುರುದತ್ತಾಂ ವೃತ್ತಿಕಾಂ ಸ ಪೂಜಯಾಮಾಸ ನಿತ್ಯಶಃ ॥೪೭॥**

ಆ ಬ್ರಾಹ್ಮಣನಾದರೋ ಹಣವನ್ನು ತೆಗೆದುಕೊಂಡು ಹೆಂಡತಿಯಿಂದ ಕೂಡಿದವನಾಗಿ ತನ್ನ ಊರಿಗೆ ಹೋದನು. ಶ್ರೀಗುರುಗಳಿಂದ ಕೊಡಲ್ಪಟ್ಟ ವೃತ್ತಿಕೆಯನ್ನು ಪ್ರತಿದಿನವೂ ಪೂಜಿಸುತ್ತಿದ್ದನು.

**ಇಷುಮಾಸೇ ರಾಘವೇಂದ್ರಂ ಶ್ರೀನಿವಾಸೇತಿ ನಾಮಕಃ ।**
**ವೇಣುಪಲ್ಲೀನಿವಾಸೀ ತು ದ್ವಿಜಶ್ಚಾಗತವಾನ್ ಮುದಾ ॥೪೮॥**

ವೇಣುಪಲ್ಲೀ (ಬಿದರಹಳ್ಳಿ) ಎಂಬ ಗ್ರಾಮದಲ್ಲಿ ವಾಸಿಸಿದ ಶ್ರೀನಿವಾಸ ಎಂದು ಹೆಸರುಳ್ಳ ಬ್ರಾಹ್ಮಣನು ಶ್ರಾವಣಮಾಸದಲ್ಲಿ ಶ್ರೀರಾಯರ ಹತ್ತಿರ ಹರ್ಷ ದಿಂದ ಬಂದನು.

**ಗುರುಂ ನತ್ವಾ ಸ್ವೇನ ಕೃತಂ ಗ್ರಂಥಜಾತಮದರ್ಶಯತ್ ।**
**ದೃಷ್ಟ್ವಾ ತದ್ರಾಘವೇಂದ್ರಾರ್ಯಸ್ತೀರ್ಥಸಂಜ್ಞಾಂ ಮುದಾ ದದೌ ॥೪೯॥**

ಗುರುಗಳಿಗೆ ನಮಸ್ಕರಿಸಿ ತನ್ನಿಂದ (ತಮ್ಮಿಂದ) ಮಾಡಲ್ಪಟ್ಟ ಗ್ರಂಥ ಸಮೂಹವನ್ನು ತೋರಿಸಿದನು (ತೋರಿಸಿದರು). ಅದನ್ನು ನೋಡಿ ಸಂತೋಷ ದಿಂದ ಪೂಜ್ಯ ಶ್ರೀರಾಯರು **ತೀರ್ಥ** ಎಂಬ ಚಿಹ್ನೆಯನ್ನು ಕೊಟ್ಟರು.

**ಭೋಜನಾವಸರೇ ವಿಪ್ರೋ ಗುರುಸನ್ನಿಧಿಸಂಸ್ಥಿತಃ ।**
**ಗುರುಭುಕ್ತಂ ಸರ್ಷಪಂ ಸ ತ್ಯಕ್ತವಾನ್ ವ್ರತಭೀತಿತಃ ॥೫೦॥**

ಬಿದರಹಳ್ಳಿ ಶ್ರೀನಿವಾಸಾಚಾರ್ಯರು ಊಟದ ಸಮಯದಲ್ಲಿ ಶ್ರೀಗುರು

ಗಳ ಹತ್ತಿರ ಕುಳಿತವರಾಗಿ ಶ್ರೀಗುರು ತಿಂದಂತಹ (ಅಡಿಗೆಯಲ್ಲಿ ಉಪಯೋಗಿಸಿದಂತಹ) ಸಾಮಾನೆಯನ್ನು ಶ್ರೀನಿವಾಸಾಚಾರ್ಯರು ಪ್ರಶ್ನೆ ಕೇಳುವುದು ಎಂಬ ಭಯದಿಂದ ಬಿಟ್ಟರು (ತಿನ್ನಲಿಲ್ಲ).

**ಭೋಜನಾನಂತರಂ ವಿಪ್ರಃ ಶ್ರೀಗುರೋರಕ್ಷತಾದಿಕಾನ್ ।**
**ಗೃಹೀತ್ವಾ ತಂ ಗುರುಂ ನತ್ವಾ ಶ್ರೀನಿವಾಸೋ ಯಯೌ ಪುರಂ ॥೫೦॥**

ಬ್ರಾಹ್ಮಣನಾದ ಶ್ರೀನಿವಾಸಾಚಾರ್ಯರು ಊಟವಾದ ಮೇಲೆ ಶ್ರೀಗುರುಗಳಿಂದ ಫಲಮಂತ್ರಾಕ್ಷತೆಗಳನ್ನು ತೆಗೆದುಕೊಂಡು ಶ್ರೀರಾಯರಿಗೆ ನಮಸ್ಕರಿಸಿ ಊರಿಗೆ ಹೋದರು.

**ತತ್ರಾಗ್ರಜಂ ದ್ವಿಜೋ ನತ್ವಾ ತೀರ್ಥಸಂಜ್ಞಾಂ ನ್ಯವೇದಯತ್ ।**
**ಯಾದವಾರ್ಯೋಽನುಜಂ ದೃಷ್ಟ್ವಾ ಪ್ರೋಚೇ ತ್ವಂ**
**ನಿಗ್ರಹೀತಿ ಸಃ ॥೫೧॥**

(ಊರಿನಲ್ಲಿ) ಶ್ರೀನಿವಾಸಾಚಾರ್ಯರು ಅಣ್ಣನಿಗೆ ನಮಸ್ಕರಿಸಿ (ಶ್ರೀಗುರುಗಳಿಂದ ಅನುಗ್ರಹಿಸಿದ) ತೀರ್ಥ ಎಂಬ ಚಿಹ್ನೆಯನ್ನು ತಿಳಿಸಿದರು. ಅಣ್ಣಂದಿರಾದ ಯಾದವಾರ್ಯರು ತಮ್ಮನನ್ನು ನೋಡಿ ನೀನು ಗುರುಗಳ ನಿಗ್ರಹಕ್ಕೆ ಕಾರಣನು ಎಂದು ಹೇಳಿದರು.

**ಊರ್ಣವಸ್ತ್ರಂ ದದೌ ಮಹ್ಯಮಕ್ಷತಾದೀನಪಿ ಪ್ರಭುಃ ।**
**ಏವಂ ಮಯಿ ದಯಾಂ ಚಕ್ರೇ ನಿಗ್ರಹಂ ನಾಕರೋದ್ಗುರುಃ ॥೫೨॥**

ಒಡೆಯರಾದ ಶ್ರೀರಾಘವೇಂದ್ರಗುರುಗಳು ನನಗೆ ಶಾಲನ್ನು ಫಲ ಮಂತ್ರಾಕ್ಷತೆಗಳನ್ನು ಕೊಟ್ಟರು. ಈ ರೀತಿಯಾಗಿ ನನ್ನಲ್ಲಿ ದಯೆಯನ್ನು ಮಾಡಿದರು ನಿಗ್ರಹವನ್ನು ಮಾಡಲಿಲ್ಲ.

**ಇತ್ಯುಕ್ತವಾಂಸಮನುಜಂ ದೇಹಿ ಮಂತ್ರಾಕ್ಷತಾನಿತಿ ।**
**ಪ್ರೋಕ್ತೋಽಸೌ ಯಾದವಾರ್ಯೇಣಾಕ್ಷತಾನ್**
**ಕೃಷ್ಣಾನದರ್ಶಯತ್ ॥೫೩॥**

ಈ ರೀತಿಯಾಗಿ ಹೇಳಿದ ತಮ್ಮನನ್ನು, ಮಂತ್ರಾಕ್ಷತೆಗಳನ್ನು ಕೊಡು

ಎಂದು ಯಾದವಾರ್ಯರಿಂದ ಹೇಳಿಸಿಕೊಳ್ಳಲ್ಪಟ್ಟ ಶ್ರೀನಿವಾಸಾಚಾರ್ಯರು ಕಪ್ಪಾದ ಮಂತ್ರಾಕ್ಷತೆಗಳನ್ನು ತೋರಿಸಿದರು.

**ಕೃಷ್ಣಾಕ್ಷತಾನ್ ಯಾದವಾರ್ಯಃದೃಷ್ಟ್ವಾ ತಂ ಚ ಪುನರ್ಗುರುಮ್ ।**
**ಗತ್ವಾನುಗ್ರಹಪಾತ್ರಸ್ತ್ವ ಭೂತ್ವಾ ಯಾಹೀತಿ ಚೋಕ್ತವಾನ್ ॥೫೫॥**

ಯಾದವಾರ್ಯರು ಕಪ್ಪಾದ ಮಂತ್ರಾಕ್ಷತೆಗಳನ್ನು ನೋಡಿ ನೀನಾದರೋ ಮತ್ತು ಶ್ರೀಗುರುಗಳಲ್ಲಿ ಹೋಗಿ ಅನುಗ್ರಹಕ್ಕೆ ಪಾತ್ರನಾಗಿ ಬಾ ಎಂದು ಹೇಳಿದರು.

**ಭ್ರಾತ್ರಾಜ್ಞಯಾ ಗುರುಂ ಗತ್ವಾ ಸರ್ವವಾರ್ತಾಂ ನ್ಯವೇದಯತ್ ।**
**ಭೋಜನೇ ಸರ್ಷಪಂ ಭುಕ್ತ್ವಾಽಕ್ಷತಾನ್ ಗೃಹ್ಣನ್**
**ಪುರಂ ಯಯೌ ॥೫೬॥**

ಅಣ್ಣನ ಅಪ್ಪಣೆಯಿಂದ ಶ್ರೀಗುರುಗಳಲ್ಲಿಗೆ ಹೋಗಿ ಎಲ್ಲ ವಿಷಯವನ್ನು ಹೇಳಿದರು. ಊಟದಲ್ಲಿ ಸಾಸುವೆಯನ್ನು ತಿಂದು (ತೆಗೆದುಕೊಂಡು) ಮಂತ್ರಾಕ್ಷತೆಯನ್ನು ಸ್ವೀಕರಿಸಿ ಊರಿಗೆ ಹೊರಟರು.

**'ಮಂತ್ರಾಕ್ಷತಾನ್ ದರ್ಶಯೇತಿ' ತಮೂಚೇ ಪುನರಗ್ರಜಃ ।**
**ಅನುಗ್ರಹಜ್ಞಾಪಕಾಂಶ್ಚ ದೃಷ್ಟ್ವಾರಕ್ತಾನ್ ಮುದಂ ಯಯೌ ॥೫೭॥**

ಅಣ್ಣಂದಿರಾದ ಯಾದವಾರ್ಯರು ಮಂತ್ರಾಕ್ಷತೆಗಳನ್ನು ತೋರಿಸು ಎಂದು ಮತ್ತೆ ಶ್ರೀನಿವಾಸಾಚಾರ್ಯರನ್ನು ಕುರಿತು ಮಾತನಾಡಿದರು. (ಶ್ರೀನಿವಾಸಾಚಾರ್ಯರನ್ನು ಕೇಳಿದರು) ಅನುಗ್ರಹ ಸೂಚಕಗಳಾದ ಕೆಂಪಾದ (ಮಂತ್ರಾಕ್ಷತೆಯನ್ನು) ನೋಡಿ ಸಂತೋಷವನ್ನು ಹೊಂದಿದರು.

**ತದಾ ಸ ಸ್ವಾನುಜಂ ಪ್ರೋಚೇ ವದ ನಿಗ್ರಹಕಾರಣಮ್ ।**
**ವ್ರತಭಂಗಭಿಯಾ ತತ್ರ ಸಿದ್ಧಾರ್ಥಂ ತ್ಯಕ್ತವಾನಹಮ್ ॥೫೮॥**

ಆಗ ಯಾದವಾರ್ಯರು ತಮ್ಮ ತಮ್ಮನಾದ ಶ್ರೀನಿವಾಸಾಚಾರ್ಯರನ್ನು (ಗುರುಗಳ) ನಿಗ್ರಹಕಾರಣವನ್ನು ಹೇಳು (ಎಂದು) ಪ್ರಶ್ನಿಸಿದರು. ನಾನು ವ್ರತ ಕೆಡುವುದು ಎಂಬ ಭಯದಿಂದ ಶ್ರೀಮಠದಲ್ಲಿ ಸಾಸುವೆಯನ್ನು ಬಿಟ್ಟೆನು (ತೆಗೆದು ಕೊಳ್ಳಲಿಲ್ಲ).

**ಇತ್ಯೂಚಿವಾಂಸಂ ತಂ ದೃಷ್ಟ್ವಾ ಯಾದವಾರ್ಯೋಽವದತ್ತದಾ ।**
**ಯತ್ಸನ್ನಿಧಿಂ ಗತೋಽಸಿ ತ್ವಂ ತದಾಚಾರಂ ಕುರು ತ್ವಿತಿ ॥೫೯॥**

ಈ ರೀತಿ ಹೇಳಿದ ತಮ್ಮನನ್ನು ನೋಡಿ ಯಾದವಾರ್ಯರು ಆಗ ಮಾತ ನಾಡಿದರು, ನೀನು ಯಾವ ಮಹನೀಯರ ಸನ್ನಿಧಿಗೆ ಹೋಗುವಿಯೋ ಅಲ್ಲಿಯ ಆಚಾರವನ್ನು ಮಾಡು ಎಂದು (ಹೇಳಿದರು).

**ತದಾರಭ್ಯ ಜನಾಃಸರ್ವೇ ಗುರುದತ್ತಸುಸಂಜ್ಞಯಾ ।**
**ತೀರ್ಥೋತ್ತರಂ ಶ್ರೀನಿವಾಸಂ ಜಗದುರ್ಹೃಷ್ಟಮಾನಸಾಃ ॥೬೦॥**

ಅಂದಿನಿಂದ ಆರಂಭಿಸಿ ಸಂತುಷ್ಟಮನಸ್ಕರಾದ ಎಲ್ಲ ಜನರು ಶ್ರೀಗುರು ಗಳಿಂದ ಕೊಡಲ್ಪಟ್ಟ ಚಿಹ್ನೆಯಿಂದ ತೀರ್ಥ ಎಂಬ ಪದವೇ ಕೊನೆಯಲ್ಲಿ ಆಗಿ ಉಳ್ಳ ಶ್ರೀನಿವಾಸನನ್ನು ಹೇಳಿದರು (ಶ್ರೀನಿವಾಸತೀರ್ಥರು ಎಂದು ಕರೆದರು).

**ಅಥ ತಂಜಾಪುರವಿರಾಟ್ ಗುರುಂ ನತ್ವಾಽವದತ್ತದಾ ।**
**ದ್ವಾದಶಾಬ್ದಕ್ಷಾಮಸತ್ವಾದ್ರಕ್ಷ ಮಾಂ ಸದ್ಗುರೋ ತ್ವಿತಿ ॥೬೧॥**

ಅನಂತರದಲ್ಲಿ ತಂಜಾಪುರಿಯ ಅರಸನು ಶ್ರೀಗುರುಗಳಿಗೆ ನಮಸ್ಕರಿಸಿ, ನಂತರ ಮಾತನಾಡಿದನು. ಹನ್ನೆರಡು ವರ್ಷ ಬರಗಾಲ ಇರುವದರಿಂದ ಶ್ರೇಷ್ಠ ಗುರುಗಳೇ ನನ್ನನ್ನು ರಕ್ಷಿಸಿರಿ ಎಂದು (ಪ್ರಾರ್ಥಿಸಿದನು).

**ನೃಪಂ ಮುಹುಃಪ್ರಾರ್ಥಯಂತಂ ಸಮಾಧತ್ತೇ ಸ್ಮ ಸದ್ಗುರುಃ ।**
**'ರಾಜನ್! ಮಾ ಭೈರಿಹೇ' ತ್ಯುಕ್ತ್ವಾ ಕಾಮಧೇನ್ವೇವ ರಕ್ಷ್ಯಸೇ ॥೬೨॥**

ಪೂಜ್ಯ ಶ್ರೀಗುರುಗಳು ಮತ್ತು ಮತ್ತು ಬೇಡುವ ಅರಸನನ್ನು ಕುರಿತು, ರಾಜನೇ! ಇಲ್ಲಿ ಅಂಜಬೇಡ, ಕಾಮಧೇನುವಿನಂತೆ ರಕ್ಷಿಸಲ್ಪಡುತ್ತಿ ಎಂದು ಹೇಳಿ ಸಮಾಧಾನಪಡಿಸಿದರು.

**ಪ್ರಾತಃಕಾಲೇ ತೇನ ಸಹ ಗುರುಸ್ತಂಜಾಪುರಂ ಯಯೌ ।**
**ನಿಖಿಲೇಷು ಪದಾರ್ಥೇಷು ಶ್ರೀಬೀಜಂ ವಿಲಿಲೇಖ ಸಃ ॥೬೩॥**

ಪ್ರಾತಃಕಾಲದಲ್ಲಿ ಶ್ರೀಗುರುಗಳು ರಾಜನಿಂದ ಕೂಡಿಕೊಂಡು, ತಂಜಾ ಪೂರಿಗೆ ಪ್ರಯಾಣಮಾಡಿದರು. ಶ್ರೀರಾಯರು (ಅರಸನ ಅರಮನೆಯಲ್ಲಿ) ಎಲ್ಲ ಪದಾರ್ಥಗಳ ಮೇಲೆ ಶ್ರೀಬೀಜವನ್ನು ಚೆನ್ನಾಗಿ ಬರೆದರು.

**ತತೋ ನದೀಂ ಗುರುರ್ಗತ್ವಾ ಧ್ಯಾತವಾನ್ ವಾಸುದೇವಕಂ।**
**ತತೋ ಭೂಪಮುವಾಚೇದಂ ರಾಘವೇಂದ್ರಗುರುರ್ಮುದಾ ॥೬೪॥**

ಆಮೇಲೆ ಶ್ರೀಗುರುಗಳು ನದಿಗೆ ಹೋಗಿ ಶ್ರೀವಾಸುದೇವನನ್ನು ಧ್ಯಾನಿಸಿದರು, ಆಮೇಲೆ ಶ್ರೀರಾಘವೇಂದ್ರಗುರುಗಳು ಸಂತೋಷದಿಂದ ಮುಂದೆ ಹೇಳುವ ರೀತಿಯಲ್ಲಿ ಮಾತನಾಡಿದರು.

**ದ್ವಾದಶಾಬ್ದಂ ಯಥೇಚ್ಛಂ ತ್ವಂ ಜಲಧಾನ್ಯಾನಿ ದೇಹಿ ಭೋಃ।**
**ನೃಭ್ಯೋ ಕ್ಷುತ್ತೃಡ್ಭ್ಯಾಧಿತೇಭ್ಯಃಸುಕಾಲಾವಧಿ ಸತ್ಪ್ರಭೋ ॥೬೫॥**

ಯೋಗ್ಯ ಮಹಾರಾಜನೇ! ಹಸಿವೆ ನೀರಡಿಕೆಯಿಂದ ಬಳಲಿದ ಮಾನವರಿಗೆ ಹನ್ನೆರಡು ವರ್ಷ ನೀರು ಧಾನ್ಯಾದಿಗಳನ್ನು ಯಥೇಚ್ಛವಾಗಿ ಕೊಡು.

**ಏವಂ ವಾಕ್ಯಂ ಗುರೋಃಶ್ರುತ್ವಾ ಸಂತೋಷಂ ಲಬ್ಧವಾನ್ ನೃಪಃ।**
**ಪ್ರಾರ್ಥನಾಂ ನೃಪವರ್ಯಸ್ಯ ಶ್ರುತ್ವಾಽಸೌ ರಾಘವೇಂದ್ರಕಃ।**
**ದ್ವಾದಶಾಬ್ದಂ ಸ್ಥಿತಸ್ತತ್ರ ಕುಂಭಘೋಣಂ ತತೋ ಯಯೌ ॥೬೬॥**

ಈ ರೀತಿಯಾದ ಶ್ರೀಗುರುಗಳ ವಾಕ್ಯವನ್ನು ಆರಸನು ಕೇಳಿ ಸಂತೋಷ ಹೊಂದಿದನು. ಈ ಶ್ರೀರಾಘವೇಂದ್ರತೀರ್ಥರು ಶ್ರೇಷ್ಠನಾದ ರಾಜನ ಪ್ರಾರ್ಥನೆಯನ್ನು ಕೇಳಿ ಆ ತಂಜಾವೂರಿನಲ್ಲಿ ಹನ್ನೆರಡು ವರ್ಷ ಇರುವವರಾಗಿ ಆಮೇಲೆ ಕುಂಭಘೋಣಕ್ಕೆ ತೆರಳಿದರು.

**ದುರ್ಭಿಕ್ಷಧ್ವಂಸಿನಂ ರಾಜಾ ದೃಷ್ಟ್ವಾ ಗುರುವರಂ ಮುದಾ।**
**ಮಣಿಮಾಲಾಂ ದದೌ ತಸ್ಮೈ ತ್ವನರ್ಘ್ಯಾಮುತ್ತಮಾಂ ತದಾ ॥೬೭॥**

ಆಗ ದೊರೆಯು ಕ್ಷಾಮವನ್ನು ನಾಶಮಾಡಿದ (ಪರಿಹರಿಸಿದ) ಪೂಜ್ಯ ಶ್ರೀಗುರುಗಳನ್ನು ನೋಡಿ ಸಂತೋಷದಿಂದ ಅಮೌಲ್ಯವಾದ ಉತ್ತಮವಾದ ರತ್ನದ ಮಾಲೆಯನ್ನು ಶ್ರೀರಾಯರಿಗೆ ಕೊಟ್ಟನು.

**ಪೂಜಾಕಾಲೇ ತೇನ ದತ್ತಾಂ ಮಾಲಿಕಾಂ ರತ್ನನಿರ್ಮಿತಾಂ।**
**ಸಮಕ್ಷಂ ರಾಜವರ್ಯಸ್ಯ ವಹ್ನೌ ಚಿಕ್ಷೇಪ ಸದ್ಗುರುಃ ॥೬೮॥**

ಸದ್ಗುರುಗಳಾದ ಶ್ರೀರಾಘವೇಂದ್ರತೀರ್ಥರು ಪೂಜಾಸಮಯದಲ್ಲಿ

(ಅಗ್ನ್ಯಂತರ್ಗತಶ್ರೀಪರಶುರಾಮದೇವರ ಪೂಜಾಸಮಯದಲ್ಲಿ) ಮಹಾರಾಜ ನಿಂದ ಕೊಡಲ್ಪಟ್ಟ ರತ್ನಖಚಿತವಾದ ಮಾಲೆಯನ್ನು ಅರಸನ ಎದುರಿನಲ್ಲಿಯೇ ಬೆಂಕಿಯಲ್ಲಿ (ಹೋಮದ ಕುಂಡದಲ್ಲಿರುವ ಬೆಂಕಿಯಲ್ಲಿ) ಹಾಕಿದರು.

**ತದ್ದೃಷ್ಟ್ವಾ ದತ್ತಮಾಲೋಽಯಂ ನಿಂದಾಂ ಚಕ್ರೇ ಗುರೋಃಕೃತಿಂ ।**
**ಕರ್ಣೋಪಕರ್ಣಂ ಶ್ರುತ್ವಾ ತಾಂ ಗುರೂ ರಾಜಾನಮಾಹ್ವಯತ್ ॥೯॥**

ತನ್ನಿಂದ ಕೊಡಲ್ಪಟ್ಟ ಈ ಮಾಲೆಯು ಬೆಂಕಿಯಲ್ಲಿ ಹಾಕಿದುದನ್ನು ನೋಡಿ, ಶ್ರೀಗುರುಗಳ ಕಾರ್ಯವನ್ನು ನಿಂದಿಸಿದನು. ಕರ್ಣೋಪಕರ್ಣವಾಗಿ ಆ ಸುದ್ದಿ ಯನ್ನು ಕೇಳಿ ಶ್ರೀರಾಯರು ರಾಜನನ್ನು ಕರೆಸಿದರು.

**ಭಸ್ಮೀಭೂತಾಂ ರತ್ನಮಾಲಾಂ ಪುನಸ್ತಸ್ಮೈ ದದೌ ಮುದಾ ।**
**ಪೂರ್ವರೂಪಾದುತ್ತಮಾಂ ತಾಂ ದೃಷ್ಟ್ವಾ ವಿಸ್ಮಯಮಾಗತಃ ॥೨೦॥**

ಸುಟ್ಟು ಭಸ್ಮವಾಗಿರುವ ಮಣಿಹಾರವನ್ನು ರಾಜನಿಗೆ ಸಂತೋಷದಿಂದ ಪುನಃ ಕೊಟ್ಟರು. ಹಿಂದೆ ಇದ್ದುದಕ್ಕಿಂತಲೂ ಉತ್ತಮವಾದ ಆ ರತ್ನಹಾರ ವನ್ನು ನೋಡಿ ಅಚ್ಚರಿಗೊಂಡನು.

**ರಾಜಾ ನತ್ವಾ ಗುರುಶ್ರೇಷ್ಠಂ ಮಾಲಿಕಾಮರ್ಪಯತ್ ಪುನಃ ।**
**ತದಾ ರಾಜಾ ಜನಾಃಸರ್ವೇ ರಾಘವೇಂದ್ರಂ ಮುಹುರ್ಮುಹುಃ ॥**
**ಶಶಂಸುಸ್ತೇ ನಮೋವಾಕಂ 'ಕ್ಷಮಸ್ವೇತ್ಯಪರಾಧಕಾನ್' ॥೨೧॥**

ರಾಜನು ಶ್ರೇಷ್ಠಗುರುಗಳಿಗೆ ನಮಿಸಿ ಮಣಿಮಾಲೆಯನ್ನು ಹಿಂತಿರುಗಿಸಿ ದನು (ಮತ್ತೆ ಕೊಟ್ಟನು). ಆಗ ರಾಜನು, ಎಲ್ಲ ಜನರೂ ಪುನಃ ಪುನಃ ಶ್ರೀರಾಘವೇಂದ್ರತೀರ್ಥರನ್ನು ಸ್ತುತಿಸಿದರು. ಅವರುಗಳು ಅಪರಾಧಿಗಳನ್ನು ಕ್ಷಮಿಸಿ (ಎಂದೂ) ನಮಸ್ಕರಿಸಿದರು.

**ತತಃಶ್ರೀರಾಘವೇಂದ್ರಾರ್ಯೋ ಭಕ್ತೋದ್ಧರಣಕಾಂಕ್ಷಯಾ ।**
**ವೃಂದಾವನಸ್ಥಲಾಕಾಂಕ್ಷೀ ಕುಂಭಘೋಣಂ ಜಹೌ ತದಾ ॥೨೨॥**

ಆಮೇಲೆ ಶ್ರೀರಾಘವೇಂದ್ರತೀರ್ಥರು ಭಕ್ತರನ್ನು ಉದ್ಧರಿಸಲು ಹಾಗೂ ತಮ್ಮ ಬೃಂದಾವನದ ಸ್ಥಳವನ್ನು ಅಪೇಕ್ಷಿಸುವವರಾಗಿ ಕುಂಭಘೋಣಪಟ್ಟಣ ವನ್ನು ಬಿಟ್ಟರು.

ಗ್ರಾಮೇऽನ್ಯಸ್ಮಿನ್ ರಾಘವೇಂದ್ರಮಾಗತ್ಯ ಪತಿತೋ ದ್ವಿಜಃ ।
ರಾಘವೇಂದ್ರ ! ದಯಾಸಿಂಧೋ !
ಗ್ರಾಮಸ್ಥೈರ್ನಿಂದಿತೋऽಸ್ಮ್ಯಹಮ್ ॥೭೩॥

ಇನ್ನೊಂದು ಊರಿನಲ್ಲಿ ಪತಿತನಾದ (ಪಾಪಿಯಾದ) ಬ್ರಾಹ್ಮಣನು ಶ್ರೀರಾಯರಲ್ಲಿಗೆ ಬಂದು ದಯಾಸಮುದ್ರರಾದ ಗುರುಶ್ರೀರಾಘವೇಂದ್ರರೇ ! ಊರಿನ ಜನರಿಂದ ನಾನು ನಿಂದಿತನಾಗಿದ್ದೇನೆ.

ಭಕ್ತೋದ್ಧರಣಶೀಲಂ ತ್ವಾಂ ಮತ್ವಾ ಪ್ರಾಪ್ತೋऽಸ್ಮಿ ಸದ್ಗುರೋ !
ಇತ್ಯುಕ್ತ್ವಾ ರೂಪ್ಯಶತಕಂ ದತ್ವಾ ತಸ್ಮೈ ನನಾಮ ಸಃ ॥೭೪॥

ಪೂಜ್ಯಗುರುಗಳೇ ! ತಮ್ಮನ್ನು ಭಕ್ತರನ್ನು ಉದ್ಧರಿಸುವ ಸ್ವಭಾವವುಳ್ಳವರು (ಎಂದು) ತಿಳಿದು ಬಂದಿರುವೆನು. ಎಂದು ಹೇಳಿ ನೂರುರೂಪಾಯಿಗಳನ್ನು ಶ್ರೀಗುರುಗಳಿಗೆ ಕೊಟ್ಟು ಆ ಬ್ರಾಹ್ಮಣನು ನಮಿಸಿದನು.

ಪತಿತಂ ಭಕ್ತವರ್ಯಂ ತಂ ಜ್ಞಾತ್ವಾ ಓಮಿತ್ಯುವಾಚ ಸಃ ।
ಮಧ್ಯಾಹ್ನೇ ಶಂಖತೀರ್ಥೇನ ಪೂತಂ ಚಕ್ರೇ ಗುರುಸ್ತು ತಂ ॥೭೫॥

ಶ್ರೀರಾಘವೇಂದ್ರಗುರುಗಳು ಭಕ್ತಶ್ರೇಷ್ಠನಾದ ಆತನನ್ನು ಪತಿತನನ್ನಾಗಿ ತಿಳಿದು (ನಿನ್ನ ಇಚ್ಛೆಯಂತೆ ಉದ್ಧರಿಸುವೆ ಎಂಬ ಸೂಚಕವಾದ) 'ಓಂ' (ಹಾಗೇ ಆಗಲಿ) ಎಂದು ಹೇಳಿದರು. (ಪೂಜೆಯು ಮುಗಿದು ಬ್ರಾಹ್ಮಣರಿಗೆ ತೀರ್ಥವನ್ನು ಕೊಡುವಾಗ) ಮಧ್ಯಾಹ್ನದಲ್ಲಿ ಶ್ರೀರಾಯರು ಶಂಖತೀರ್ಥದಿಂದ (ಶಂಖತೀರ್ಥವನ್ನು ಪ್ರೋಕ್ಷಣೆ ಮಾಡುವದರಿಂದ) ಆ ಬ್ರಾಹ್ಮಣನನ್ನು ಪುನೀತನನ್ನಾಗಿ ಮಾಡಿದರು.

ದ್ರವ್ಯಲಿಪ್ಸುರ್ಗುರುರಿತಿ ಪ್ರೋಚೇ ಸರ್ವೇ ಜನಾಸ್ತದಾ ।
ತಚ್ಛ್ರುತ್ವಾ ರಾಘವೇಂದ್ರಾರ್ಯಃಸರ್ವಾನಾಹ್ವಾಯಯದ್ಗುರುಃ ॥೭೬॥

ಆಗ ಎಲ್ಲ ಜನರೂ ಹಣವನ್ನಪೇಕ್ಷಿಸುವ ಗುರುಗಳು ಎಂದು ಹೇಳಿದರು. ಗುರುಗಳಾದ ಶ್ರೀರಾಘವೇಂದ್ರಾರ್ಯರು ಅದನ್ನು ಕೇಳಿ (ಮರುದಿನ ಶಿಷ್ಯನಿಂದ) ಎಲ್ಲರನ್ನೂ ಕರೆಸಿದರು.

**ತತಃಸಮಕ್ಷಂ ಸರ್ವೇಷಾಂ ರಾಘವೇಂದ್ರಗುರುಸ್ತದಾ।**
**ಭಲ್ಲಾತಕೀರಸಾಕ್ಲಿನ್ನಂ ವಸ್ತ್ರಮಾನಾಯಯದ್ವಿಭುಃ ||೭೭||**

ಅನಂತರದಲ್ಲಿ ಸಮರ್ಥರಾದ ಶ್ರೀರಾಘವೇಂದ್ರಗುರುಗಳು ಗೇರಿನ (ಕೇರಿನ) ರಸದಲ್ಲಿ ನೆನೆಯಿಸಿದ (ತೋಯಿಸಿದ) ಬಟ್ಟೆಯನ್ನು ತರಿಸಿ—

**ರಾಮಪೂಜಾಂ ಸಮಾಪ್ಯಾಥ ಶಂಖತೀರ್ಥಂ ಗುರುಸ್ತದಾ।**
**ಕೃಷ್ಣವಸ್ತ್ರೇ ಕ್ಷಿಪಂಸ್ತತ್ರ ಶುಭ್ರಂ ಚಕ್ರೇ ಕ್ಷಣೇ ಧ್ರುವಮ್ ||೭೮||**

ಆಗ ಶ್ರೀರಾಯರು ಶ್ರೀಮೂಲರಾಮರ ಪೂಜೆಯನ್ನು ಮುಗಿಸಿ, ಶಂಖ ತೀರ್ಥವನ್ನು ಅಲ್ಲಿರುವ (ಗೇರಿನ ರಸದಲ್ಲಿ ನೆನೆಯಿಸಿದ) ಕಪ್ಪುಬಟ್ಟೆಯ ಮೇಲೆ ಪ್ರೋಕ್ಷಣೆ ಮಾಡಿದವರಾಗಿ ಒಂದು ಕ್ಷಣದಲ್ಲಿಯೇ ಬಿಳಿಯದಾದದ್ದನ್ನು ಮಾಡಿದರು. ನಿಶ್ಚಯವು.

**ಸರ್ವೇ ಜನಾಶ್ಚ ತದ್ದೃಷ್ಟ್ವಾ ವಿಸ್ಮಯಂ ಪ್ರಾಪ್ಯ ಸದ್ಗುರುಮ್।**
**ನತ್ವೇತಿ ಪ್ರಾರ್ಥಯಾಮಾಸುರಪರಾಧಾನ್ ಕ್ಷಮಸ್ವ ಭೋ ||೭೯||**

ಆ ದೃಶ್ಯವನ್ನು ಕಂಡ ಎಲ್ಲ ಜನರೂ ಆಶ್ಚರ್ಯವನ್ನು ಹೊಂದಿ ಪೂಜ್ಯ ಶ್ರೀಗುರುಗಳಿಗೆ ನಮಿಸಿ, ಸ್ವಾಮಿನ್! ಅಪರಾಧಗಳನ್ನು ಕ್ಷಮಿಸಿ ಎಂದು ಪ್ರಾರ್ಥಿಸಿದರು.

**ರಾಜಾ ಕಶ್ಚಿದ್ರಾಘವೇಂದ್ರಮಾಹಾತ್ಮ್ಯಜ್ಞಾನತೋ ಧ್ರುವಮ್।**
**ಕುತೋ ದೇಯಂ ಮಮ ಗ್ರಾಮಂ ಗುರವೇ ಚೇತ್ಯಭಾಷಯತ್ ||೮೦||**

ಶ್ರೀರಾಘವೇಂದ್ರಗುರುಗಳ ಮಾಹಾತ್ಮ್ಯೆಯನ್ನು ತಿಳಿಯದೇ ಇರುವ ಓರ್ವ ಮಹಾರಾಜನು ಶ್ರೀಗುರುಗಳಿಗಾದರೋ ನನ್ನ ಆಧೀನದಲ್ಲಿರುವ ಗ್ರಾಮವನ್ನು ಏಕೆ ಕೊಡಬೇಕು ಎಂದು ಹೇಳಿದನು.

**ತಸ್ಮಿನ್ ದಿನೇ ತತ್ಪುತ್ರಸ್ಯ ಜ್ವರಬಾಧಾಽಭವತ್ಕಿಲ।**
**ಗುರುನಿಗ್ರಹಜಾಂ ಮತ್ವಾ ಪತಿಂ ಪತ್ನೀ ನಿನಿಂದ ತಮ್ ||೮೧||**

ಅಂದಿನ ದಿನದಲ್ಲಿ ರಾಜನ ಮಗನಿಗೆ ಜ್ವರದ ಬಾಧೆಯು ಆಯಿತಷ್ಟೇ (ಆ ಬಾಧೆಯು ಗುರುನಿಗ್ರಹದಿಂದ ಬಂದದ್ದನ್ನು ತಿಳಿದು ರಾಣಿಯು ಆ ಗಂಡನನ್ನು ನಿಂದಿಸಿದಳು.

**ಪತ್ನ್ಯಾ ಚ ಭರ್ತ್ಸಿತೋ ರಾಜಾ ಗತಬಾಧೋ ಭವೇತ್ಸುತಃ ।**
**ತರ್ಹಿ ಗ್ರಾಮದ್ವಯಂ ತಸ್ಮೈ ದಾಸ್ಯಾಮೀತ್ಯವದತ್ಪ್ರಿಯಾಮ್ ॥೮೨॥**

ಹೆಂಡತಿಯಿಂದ ನಿಂದಿತನಾದ ರಾಜನಾದರೋ ಮಗನು ಹೋಗಲ್ಪಟ್ಟ ಬಾಧೆವುಳ್ಳವನಾದರೆ (ಮಗನ ಜ್ವರವು ಬಿಟ್ಟರೆ) ಶ್ರೀಗುರುಗಳಿಗೆ ಎರಡೂರು ಗಳನ್ನು ಕೊಡುವೆ ಎಂದು ಹೆಂಡತಿಯನ್ನು ಕುರಿತು (ಹೆಂಡತಿಗೆ) ಹೇಳಿದನು.

**ತತ್ಕ್ಷಣೇ ಜ್ವರಪೀಡಾ ತು ನಿವೃತ್ತಾ ತತ್ಸುತಸ್ಯ ಹಿ ।**
**ತದ್ದೃಷ್ಟ್ವಾ ರಾಜವರ್ಯಃ ಸ ಗುರುಸನ್ನಿಧಿಮಾಯಯೌ ॥೮೩॥**

ಹೇಳಿದ ಕೂಡಲೇ ರಾಜನ ಮಗನಿಂದ ಜ್ವರದ ಬಾಧೆಯಾದರೋ ನಿವೃತ್ತ ವಾಯಿತು (ರಾಜನ ಮಗನ ಜ್ವರದ ಬಾಧೆಯು ಬಿಟ್ಟಿತು). ನಿಶ್ಚಯವು. ಅದನ್ನು ನೋಡಿ ಆ ರಾಜನು ಶ್ರೀರಾಯರ ಸನಿಹಕ್ಕೆ ಬಂದನು.

**ತತ್ಸರ್ವಂ ಶ್ರೀಗುರುವರಂ ರಾಜವರ್ಯೋ ನ್ಯವೇದಯತ್ ।**
**ಗ್ರಾಮದ್ವಯಂ ಮುದಾ ದತ್ವಾ ಪಾದಪದ್ಮದ್ವಯೇಽಪತತ್ ॥೮೪॥**

ಅರಸನು ಎಲ್ಲವನ್ನೂ ಶ್ರೀಗುರುಗಳಿಗೆ ತಿಳಿಹಿಸಿದನು, ಸಂತಸದಿಂದ ಎರಡು ಊರುಗಳನ್ನು ಕೊಟ್ಟು ಪಾದಪದ್ಮದ್ವಯದಲ್ಲಿ ಬಿದ್ದನು (ನಮಸ್ಕರಿಸಿದನು).

**ರಾಜ್ಞೇ ತು ಜ್ಞಾಪಯಿತ್ವಾ ಸ್ವಂ ಹಾಮಾಹ್ಮ್ಯಂ ಗುರುರಾಟ್ ತದಾ ।**
**ನೃಪವರ್ಯಂ ಚಾನುಗಂ ಸ್ವಂ ಕೃತ್ವಾ ತು ಗತವಾನ್ ಗುರುಃ ॥೮೫॥**

ಆ ಕಾಲದಲ್ಲಿ ಶ್ರೀಗುರುರಾಜರು ಮಹಾರಾಜನಿಗೆ ತಮ್ಮ ಮಾಹಾತ್ಮ್ಯ ಯನ್ನು ತಿಳಿಹಿಸಿ (ತೋರಿಸಿ) ಮತ್ತು ರಾಜನನ್ನಾದರೋ ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡು ಶ್ರೀಗುರುಗಳು ಮುಂದೆ ಸಂಚರಿಸಿದರು.

**ಕಶ್ಚಿದ್ರಾಜಾ ವಿಪ್ರಸಂಘಾನ್ ನಿಂದಾಂ ಚಕ್ರೇ ಸ ದುರ್ಮತಿಃ ।**
**ಶುಶ್ರೂಷಾಂ ಕುರುತೇತ್ಯೂಚೇ ತೇಷಾಂ ಕ್ಷೇತ್ರಾಣ್ಯಪಾಹರತ್ ॥೮೬॥**

ದುಷ್ಟಬುದ್ಧಿಯುಳ್ಳ ಒಬ್ಬ ರಾಜನು ಬ್ರಾಹ್ಮಣಸಮೂಹವನ್ನು ನಿಂದಿ ಸಿದನು. ಆ ರಾಜನು ಆ ಬ್ರಾಹ್ಮಣರುಗಳ ಹೊಲಗಳನ್ನು (ಜಮೀನುಗಳನ್ನು) ಅಪಹರಿಸುವವನಾಗಿ ಸೇವೆಯನ್ನು (ಕೆಲಸವನ್ನು) ಮಾಡಿ ಎಂದು ಹೇಳಿದನು.

**ಏವಂ ಕಾಲೇ ಗತೇ ಗ್ರಾಮಂ ರಾಘವೇಂದ್ರಸ್ತಮಾಯಯೌ ।**
**ತೇ ವಿಪ್ರಾ ಗುರುವರ್ಯಾಯ ತಂ ಸರ್ವಂ ವೃತ್ತಂ ನ್ಯವೇದಯನ್ ॥೮೭॥**

ಹೀಗೆ ಕಾಲವು ಕಳೆಯುತ್ತಿರಲು ಶ್ರೀರಾಯರು ಆ ಊರಿಗೆ ಬಂದರು. ಆ ಬ್ರಾಹ್ಮಣರು ಶ್ರೀರಾಯರಿಗೆ ರಾಜನಿಂದ ತಮಗಾದ ಎಲ್ಲ ವಿಷಯವನ್ನು ವಿಜ್ಞಾಪಿಸಿದರು.

**ಇತಿ ಸಂಪ್ರಾರ್ಥಯಾಮಾಸುರ್ಜೀವನಂ ವದ ಸದ್ಗುರೋ !**
**ಅಸ್ಮಾಕಂ ರಕ್ಷಕೋ ನಾಸ್ತಿ ತ್ವದ್ವಿನಾ ದೀನಪಾಲಕ ॥೮೮॥**

ದೀನರಕ್ಷಕರಾದ ಸದ್ಗುರುಗಳೇ ! ನಿಮ್ಮ ವಿನಹ ನಮ್ಮನ್ನು ಪೊರೆಯುವವರಿಲ್ಲ, ನಮ್ಮ ಜೀವನೋಪಾಯವನ್ನು ಹೇಳಿ ಎಂದು ಪ್ರಾರ್ಥಿಸಿದರು.

**ಗುರುರೇವಂ ಪ್ರಾರ್ಥ್ಯಮಾನಃಸ್ವಂ ವೇತಾಳಮುವಾಚ ಹ ।**
**ರಾಜಪುತ್ರಂ ಗೃಹೀತ್ವಾ ತ್ವಂ ದಿನಯುಗ್ಮಂ ಸುಪಾಲಯ ॥೮೯॥**

ಈ ರೀತಿ ಪ್ರಾರ್ಥಿತರಾದ ಶ್ರೀಗುರುಗಳು ತಮ್ಮ (ವಶದಲ್ಲಿರುವ) ವೇತಾಳವನ್ನು (ಕರೆದು) ನೀನು ರಾಜನ ಮಗನನ್ನು ತೆಗೆದುಕೊಂಡು ಹೋಗಿ ಎರಡು ದಿನಗಳು ಚೆನ್ನಾಗಿ ರಕ್ಷಿಸು (ಎಂದು) ಹೇಳಿದರು.

**ತಥೇತ್ಯುಕ್ತ್ವಾ ಗುರುಂ ನತ್ವಾ ವೇತಾಳಸ್ತಂ ತದಾ ನಯನ್ ।**
**ಸ ರಾಜಾ ಸ್ವಸ್ಯ ಪುತ್ರಂ ತಂ ಗೃಹೇಽದೃಷ್ಟ್ವಾ ಚಚಾರ ಹಿ ॥೯೦॥**

ಆಗ ವೇತಾಳವು ಹಾಗೇ ಆಗಲಿ ಎಂದು ಹೇಳಿ ಗುರುಗಳಿಗೆ ಎರಗಿ ಆ ರಾಜಕುಮಾರನನ್ನು ತೆಗೆದುಕೊಂಡು ಹೋಯಿತು. ರಾಜನು ತನ್ನ ಆ ಮಗನನ್ನು ಮನೆಯಲ್ಲಿ ಕಾಣದೇ ಸಂಚರಿಸಿದನು. (ಹುಡುಕಿದನು).

**ಕುತ್ರಾಪ್ಯದೃಷ್ಟ್ವಾ ಪುತ್ರಂ ತನ್ಮಾಹಾತ್ಮ್ಯಜ್ಞೋ ಗುರುಂ ಗತಃ ।**
**ನತ್ವಾ ನಿವೇದ್ಯ ವೃತ್ತಂ ಸ್ವಂ ಪುತ್ರಂ ದೇಹೀತಿ ಚೋಕ್ತವಾನ್ ॥೯೧॥**

ಮಗನನ್ನು ಎಲ್ಲಿಯೂ ಕಾಣದೇ, ಶ್ರೀಗುರುಗಳ ಮಹಾತ್ಮ್ಯೆಯನ್ನರಿತ ಅರಸನು ಶ್ರೀರಾಯರನ್ನು ಹೊಂದಿ (ಶ್ರೀರಾಯರಲ್ಲಿಗೆ ಹೋಗಿ) ನಮಸ್ಕರಿಸಿ ತನ್ನ

ಮಗನು ಕಾಣದೇ ಇರುವ ಸಮಾಚಾರವನ್ನು ಬಿನ್ನವಿಸಿ ಮಗನನ್ನು ಕೊಡಿ ಎಂದು ಹೇಳಿದನು. (ಪ್ರಾರ್ಥಿಸಿದನು)

**ರಾಘವೇಂದ್ರೋ ನೃಪಂ ಪ್ರೋಚೇ ಬ್ರಾಹ್ಮಣಾಂಸ್ತೋಷಯೇದ್ಯದಿ ।**
**ಸುಪ್ರಸನ್ನಾಸ್ತದಾ ವಿಪ್ರಾಃಪುತ್ರಂ ದಾಸ್ಯಂತಿ ತೇ ಧ್ರುವಮ್ ॥೯೨॥**

ಶ್ರೀರಾಘವೇಂದ್ರರು ರಾಜನಿಗೆ ಹೇಳಿದರು, ಬ್ರಾಹ್ಮಣರುಗಳನ್ನು ಸಂತೋಷಪಡಿಸಿದರೆ ಆಗ ಸುಪ್ರಸನ್ನರಾದ ಬ್ರಾಹ್ಮಣರು ನಿನಗೆ ಮಗನನ್ನು ಕೊಡುವರು. ನಿಶ್ಚಯವು.

**ತತೋ ರಾಜಾ ಬ್ರಾಹ್ಮಣೇಭ್ಯೋ ದದೌ ಕ್ಷೇತ್ರಾದಿಕಾಂಸ್ತದಾ ।**
**ಗುರ್ವಾಜ್ಞಯಾ ರಾಜಪುತ್ರಂ ವೇತಾಳಶ್ಚ ದದೌ ಧ್ರುವಮ್ ॥೯೩॥**

ಅನಂತರದಲ್ಲಿ ಅರಸನು ಬ್ರಾಹ್ಮಣರುಗಳಿಗೆ ಹೊಲವೇ ಮೊದಲಾದವುಗಳನ್ನು ಕೊಟ್ಟನು. ಆಗ ವೇತಾಳವಾದರೋ ಶ್ರೀಗುರುಗಳ ಅಪ್ಪಣೆಯಿಂದ ರಾಜನ ಮಗನನ್ನು ಕೊಟ್ಟಿತು. ನಿಶ್ಚಯವು.

**ರಾಜ್ಞಾ ತು ವಿಪ್ರಮಹಿಮಾ ಪ್ರತ್ಯಕ್ಷಂ ಚಾನ್ವಭೂಯತ ।**
**ರಾಜಾ ನತ್ವಾ ಗುರುಂ ಪ್ರೋಚೇ "ಮಾನ್ಯಾ ವಿಪ್ರಾಃಕಲಾವಪಿ" ॥೯೪॥**

ರಾಜನಾದರೋ ಬ್ರಾಹ್ಮಣರ ಮಹಿಮೆಯನ್ನು ಪ್ರತ್ಯಕ್ಷವಾಗಿ ಅನುಭವಿಸಿದನು. ಮತ್ತು ಅರಸನು ಶ್ರೀಗುರುಗಳಿಗೆ ನಮಿಸಿ, "ಕಲಿಯುಗದಲ್ಲಿಯೂ ಬ್ರಾಹ್ಮಣರು ಮಾನ್ಯರು" (ಎಂದು) ಹೇಳಿದನು.

**ತತಃಸರ್ವೇ ಬ್ರಾಹ್ಮಣಾಸ್ತೇ ರಾಘವೇಂದ್ರಗುರುಂ ಮುದಾ ।**
**ಮುಹುರ್ಮುಹುಃ ಸಂಪ್ರಣೇಮುರ್ಗುರುದಾಪಿತಜೀವಿಕಾಃ ॥೯೫॥**

ಅನಂತರದಲ್ಲಿ ಶ್ರೀಗುರುಗಳಿಂದ ಕೊಡಿಸಲ್ಪಟ್ಟ ಜೀವನವುಳ್ಳ ಆ ಎಲ್ಲ ಬ್ರಾಹ್ಮಣರು ಸಂತೋಷದಿಂದ ಶ್ರೀರಾಘವೇಂದ್ರಗುರುಗಳಿಗೆ ಚೆನ್ನಾಗಿ ನಮಸ್ಕರಿಸಿದರು.

**ಏಕಸ್ಮಿನ್ ಸೈಕತೇ ಮಾರ್ಗೇ ರಾಘವೇಂದ್ರಸ್ಯ ಸೇವಕಃ ।**
**ಲಲನಾಯಾಃಪ್ರಸೂತಿಂ ಚ ದೃಷ್ಟ್ವಾ ಪ್ರಾರ್ಥಿತವಾನ್ ಗುರುಂ ॥೯೬॥**

(ಶ್ರೀರಾಯರು ಸಂಚಾರತ್ವೇನ ಹೊರಟ) ಒಂದಾನೊಂದು ದಿನದಲ್ಲಿ ಶ್ರೀರಾಘವೇಂದ್ರತೀರ್ಥರ ಸೇವಕನು ಉಸುಕಿನ (ಮರಳಿನ) ಮಾರ್ಗದಲ್ಲಿ ತನ್ನ ಹೆಂಡತಿಯ ಹೆರಿಗೆಯನ್ನು ನೋಡಿ ಶ್ರೀಗುರುಗಳನ್ನು ಪ್ರಾರ್ಥಿಸಿದನು.

**ತದೈವ ರಾಘವೇಂದ್ರೇಣ ದೃಷ್ಟ್ವಾ ಖಿನ್ನಂ ಸ್ವಸೇವಕಂ ।**
**ಕಾಷಾಯಚೇಲಂ ಖೇ ತ್ವಾತಪತ್ರವತ್ಕೃತವಾನ್ ಪ್ರಭುಃ ॥೯೭॥**

ಪ್ರಭುಗಳಾದ ಶ್ರೀಗುರುಗಳು ದುಃಖಿತನಾದ ತಮ್ಮ ಸೇವಕನನ್ನು ನೋಡಿ, ಆಗಲೇ ಶ್ರೀರಾಘವೇಂದ್ರಗುರುಗಳಿಂದ ಆಕಾಶದಲ್ಲಿ ಕಾಷಾಯಬಟ್ಟೆಯಾದರೋ ಛತ್ರಿಯಂತೆ ಮಾಡಲ್ಪಟ್ಟಿತು.

**ಅ. ವಿ. :**— ಶ್ರೀರಾಯರು ಮೇನೆಯಲ್ಲಿ ಕುಳಿತು ಸಂಚರಿಸುತ್ತಿರುವಾಗ ಮರಳುಪ್ರದೇಶದಲ್ಲಿ ಸೇವಕನ ಹೆಂಡತಿಗೆ ಪ್ರಸವವೇದನೆ ಪ್ರಾರಂಭಿಸಿದ ಕೂಡಲೇ ನೆರಳುಕೂಡಾ ಇಲ್ಲದಿರುವ ಸ್ಥಳವನ್ನು ನೋಡಿ ಭೀತನಾದ ಆ ಸೇವಕನು ಶ್ರೀಗುರುಗಳಲ್ಲಿ ಪರಿಸ್ಥಿತಿಯನ್ನು ವಿಜ್ಞಾಪಿಸಿಕೊಂಡನು. ಆಗ ಶ್ರೀರಾಯರು ತಾವು ಹೊದ್ದ ಶಾಟಿಯನ್ನು ಆಕಾಶದಲ್ಲಿ ನಿಲ್ಲಿಸಿ, ಕೊಡೆಯಂತೆ ನೆರಳನ್ನು ಮಾಡಿದರು.

**ಜಲಹೀನಾಂ ಧರಾಂ ಜ್ಞಾತ್ವಾ ದಂಡಕಾಷ್ಠೇನ ಖಾನಯನ್ ।**
**ಕಮಂಡಲೂದಕಂ ತತ್ರ ಮಂತ್ರಪೂತಂ ಪ್ರಚಿಕ್ಷಿಪೇ ॥೯೮॥**

(ಮರಳು ಭೂಮಿಯಾದ ಪ್ರಯುಕ್ತ) ನೀರಿಲ್ಲದ ಭೂಮಿಯನ್ನು ನೋಡಿ ದಂಡಕಾಷ್ಠದಿಂದ ತೋಡುವವರಾಗಿ (ಸ್ವಲ್ಪ ತಗ್ಗನ್ನು ಮಾಡಿ) ಅಲ್ಲಿ ಮಂತ್ರದಿಂದ ಪವಿತ್ರವಾದ ಕಮಂಡಲುವಿನಲ್ಲಿರುವ ನೀರನ್ನು ಹಾಕಿದರು.

**ದಂಡಕಾಷ್ಠಕೃತಾ ವಾಪೀ ತತ್ರಾದ್ಯಾಪಿ ಪ್ರದೃಶ್ಯತೇ ।**
**ಜಲಂ ಛಾಯಾಂ ದ್ವಾರಪಸ್ತು ದೃಷ್ಟ್ವಾತೀವ ಮುದಂ ಯಯೌ ॥೯೯॥**

ದ್ವಾರಪಾಲಕನಾದರೋ, ನೀರು ಮತ್ತು ನೆರಳನ್ನು ನೋಡಿ ಅತ್ಯಂತ ಸಂತೋಷವನ್ನು ಹೊಂದಿದನು. ದಂಡಕಾಷ್ಠದಿಂದ ಮಾಡಲ್ಪಟ್ಟ ಬಾವಿಯು ಅಲ್ಲಿ ಈಗಲೂ ಕೂಡ ಚೆನ್ನಾಗಿ ಕಾಣಲ್ಪಡುತ್ತದೆ.

ಕಸ್ಮಿಂಶ್ಚಿದ್ದಿವಸೇ ಭೃತ್ಯಂ ಮಾರ್ಗಮಧ್ಯೇಽದಶತ್ಫಣೀ ।
ಸ ಸರ್ಪದಂಶನಂ ಶ್ರೀಮದ್ಗುರವೇ ಸನ್ನ್ಯವೇದಯತ್ ॥೧೦೦॥

ಒಂದಾನೊಂದು ದಿನದಲ್ಲಿ ಸೇವಕನನ್ನು ಮಧ್ಯಮಾರ್ಗದಲ್ಲಿ ಸರ್ಪವು ಕಚ್ಚಿತು. ಹಾವಿನಿಂದ ಕಡಿಸಿಕೊಂಡ ಸೇವಕನು ಶ್ರೀಪೂಜ್ಯಗುರುಗಳಿಗೆ ಹಾವು ಕಡಿದಿದ್ದನ್ನು ಅರುಹಿದನು.

ಭೃತ್ಯಾಪಮೃತ್ಯುಂ ದೃಷ್ಟ್ವಾ ತು ತಾರ್ಕ್ಷ್ಯಮಂತ್ರಜಪೇನ ಸಃ ।
ಪುರುಷೋತ್ತಮದಾಸಸ್ತಂ ಜೀವಯಾಮಾಸ ಸದ್ಗುರುಃ ॥೧೦೧॥

ಶ್ರೀಪುರುಷೋತ್ತಮದಾಸರಾದ ಪ್ರಸಿದ್ಧರಾದ ಶ್ರೀಸದ್ಗುರುಗಳು ಸೇವಕನಿಗೆ ಬಂದ ಅಪಮೃತ್ಯುವನ್ನು ನೋಡಿ ಗರುಡಮಂತ್ರಜಪದಿಂದ ಬದುಕಿಸಿದರು.

ಕಸ್ಮಿಂಶ್ಚಿದ್ವಿಪಿನೇ ಚೈತ್ರಮಧ್ಯಾಹ್ನೇ ಕಂಚನ ದ್ವಿಜಂ ।
ಚಂಡಾತಪೇನ ಸಂತಪ್ತಂ ಶಾಂತಂ ಚಕ್ರೇ ಸ್ವಶಕ್ತಿತಃ ॥೧೦೨॥

ಒಂದಾನೊಂದು ಅರಣ್ಯದಲ್ಲಿ ಚೈತ್ರಮಾಸದ ಮಧ್ಯಾಹ್ನದಲ್ಲಿ ಸೂರ್ಯನ ತಾಪದಿಂದ ಬಳಲಿದ ಯಾವನೋ ಒಬ್ಬ ಬ್ರಾಹ್ಮಣನನ್ನು (ಶ್ರೀಗುರುಗಳು) ತಮ್ಮ ಶಕ್ತಿಯಿಂದ (ತಪಃಶಕ್ತಿಯಿಂದ) ತಾಪರಹಿತನನ್ನಾಗಿ ಮಾಡಿದರು.

ಭಾಷಾತ್ರಯೇಣ ಯುಕ್ತಾನಿ ವ್ಯಾಸೋಕ್ತಾನಿ ಪ್ರಕಾಶಯನ್ ।
ಭೂಸುರೈಸ್ತು ಪ್ರಾರ್ಥ್ಯಮಾನಸ್ತತೋ ಗ್ರಾಮಾಂತರಂ ಯಯೌ॥ ೧೦೩

ಸಮಾಧಿ, ದರ್ಶನ, ಗುಹ್ಯ, ಎಂಬ ಮೂರು ಭಾಷೆಗಳಿಂದ ಕೂಡಿದ ಶ್ರೀವ್ಯಾಸದೇವರ ಉಕ್ತಿಗಳನ್ನು (ಶ್ರೀರಾಯರು) ವಿವರಿಸುವವರಾಗಿ, ಬ್ರಾಹ್ಮಣರಿಂದ ಪ್ರಾರ್ಥಿತರಾಗಿ ಅಲ್ಲಿಂದ ಬೇರೇ ಊರಿಗೆ ಹೋದರು.

ಕಸ್ಮಿಂಶ್ಚಿನ್ಮಾರ್ಗಮಧ್ಯೇ ತು ಶಿಬಿಕಾವಾಹಕಾಸ್ತದಾ ।
ದೃಷ್ಟ್ವಾರಾಮಂ ತತ್ರ ಗತ್ವಾ ದದೃಶುಸ್ತತ್ರ ವೇದಿಕಾಮ್ ॥೧೦೪॥

ಒಂದಾನೊಂದು ಮಾರ್ಗಮಧ್ಯದಲ್ಲಿ ಪಾಲಕಿಯನ್ನು ಹೊತ್ತವರು ತೋಟವನ್ನು ನೋಡಿ, ಅಲ್ಲಿಗೆ ಹೋಗಿ, ಆ ತೋಟದಲ್ಲಿ ಜಗಲಿಯನ್ನು ನೋಡಿದರು.

**ಶಿಬಿಕಾಂ ವೇದಿಕಾಯಾಂ ತೇ ಸಂಸ್ಥಾಪ್ಯ ಶ್ರಮಪೀಡಿತಾಃ ।**
**ತಸ್ಥಿಸ್ತತ್ರ ತದಾರಾಮರಕ್ಷಕೋ ದೃಷ್ಟವಾನ್ ಗುರುಮ್ ॥೧೦೫॥**

ಪಾಲಕಿಯನ್ನು ಹೊತ್ತ ಶ್ರಮದಿಂದ ಪೀಡಿತರಾದ ಅವರುಗಳು ಪಾಲಕಿಯನ್ನು ಆ ಜಗಲಿಯ ಮೇಲಿಟ್ಟರು. ಆಗ ತೋಟವನ್ನು ಕಾಯುವವನು ಶ್ರೀಗುರುಗಳನ್ನು ನೋಡಿದನು.

**ತತಃಪ್ರೋಚೇ 'ವೇದಿಕೇಯಂಶವಸಂಬಂಧಿನೀ'ತ್ಯಿತಿ ।**
**ತತೋ ಗುರುಃ ಸ್ವಸ್ಯ ಯಾನಮಧಃಸಂಸ್ಥಾಪಯನ್ ಜನೈಃ ।**
**ವೇದಿಕಾಂ ಖಾನಯಿತ್ವಾ ಸ ಶವಂ ಸಂಸ್ಥಾಪಯದ್ಬಹಿಃ ॥೧೦೬॥**

ನಂತರ ಈ ಜಗಲಿಯು ಶವಸಂಬಂಧವಾದದ್ದು, (ಶವವನ್ನು ಹೂತಿದ್ದು) ಎಂದು ಹೇಳಿದನು, ಆಮೇಲೆ ಶ್ರೀಗುರುಗಳು ತಮ್ಮ ಪಾಲಕಿಯನ್ನು ಕೆಳಗೆ ಇಡಿಸುವವರಾಗಿ ಜನರಿಂದ ಜಗಲಿಯನ್ನು ಅಗಿಸಿ ಶವವನ್ನು ಹೊರಗೆ ಇಡಿಸಿದರು. (ತೆಗೆಯಿಸಿದರು).

**ಮೃತಹೇತುಂ ಸರ್ಪದಂಶಂ ಮತ್ವಾ ಶ್ರೀರಾಘವೇಂದ್ರಕಃ ।**
**ಭುಜಂಗಂ ಮಂತ್ರರಾಜೇನ ಧ್ರುವಮಾನಯಯತ್ ಪುರಾ ॥೧೦೭॥**

ಶ್ರೀರಾಘವೇಂದ್ರತೀರ್ಥರು (ಆ ಜಗುಲಿಯಲ್ಲಿ ಹೂತಿಟ್ಟ ಹುಡುಗನು) ಸಾಯುವುದಕ್ಕೆ ಕಾರಣವು ಹಾವು ಕಚ್ಚುವಿಕೆಯು (ಎಂದು) ಪಾಲಕಿಯನ್ನು ಜಗುಲಿಯ ಮೇಲೆ ಇಡುವುದಕ್ಕಿಂತಲೂ ಪೂರ್ವದಲ್ಲಿ ತಿಳಿದು ಉತ್ತಮವಾದ ಮಂತ್ರದಿಂದ ಶೀಘ್ರವಾಗಿ ಹಾವನ್ನು ತರಿಸಿದರು.

**ಸರ್ಪೋಗುರ್ವಾಜ್ಞಯಾ ಸ್ವೀಯಂ ಸ್ವೀಚಕ್ರೇ ಗರಲಂ ತದಾ ।**
**ಮೃತಸ್ತದಾ ಸುಪ್ತಇವ ಪ್ರೋತ್ಥಾಯ ಗತವಾನ್ ಗೃಹಮ್ ॥೧೦೮॥**

ಆಗ ಸರ್ಪವು ಶ್ರೀಗುರುಗಳ ಆಜ್ಞೆಯಿಂದ ತನ್ನ ವಿಷವನ್ನು ತೆಗೆದು ಕೊಂಡಿತು. ಅಗೆದು ಹೊರತೆಗೆದ ಕಾಲದಲ್ಲಿ ಸತ್ತವನು ಮಲಗಿದವನಂತೆ ಎದ್ದು ಮನೆಗೆ ಹೋದನು.

**ಉಜ್ಜೀವಿತಂ ಸುತಂ ದೃಷ್ಟ್ವಾ ಜನಕಸ್ತ್ವತಿತುಷ್ಟವಾನ್ ।**
**ಸ ತು ಪ್ರಾಪ್ಯ ಗುರುಂ ನತ್ವಾ ತಸ್ಮೈ ಕೃಷ್ಣಾಪುರಂ ದದೌ ॥೧೦೯॥**

(ಆ ಹುಡುಗನ) ತಂದೆಯು ಬದುಕಿದ ಮಗನನ್ನು ನೋಡಿ ಅತ್ಯಂತ ಸಂತೋಷಿಸಿದನು. ಆ ರಾಜನಾದರೋ ಶ್ರೀಗುರುಗಳನ್ನು ಹೊಂದಿ (ಶ್ರೀಗುರುಗಳಲ್ಲಿಗೆ ಬಂದು) ನಮಿಸಿ, ಆ ಶ್ರೀರಾಯರಿಗೆ **ಕೃಷ್ಣಾಪುರ** ಎಂಬ ಗ್ರಾಮವನ್ನು (ದಾನವಾಗಿ) ಕೊಟ್ಟನು.

**ತತಃ ಪುರಂ ಕಿರೀಟಾಖ್ಯಂ ರಾಘವೇಂದ್ರಗುರುರ್ಗತಃ ।**
**ಗ್ರಾಮಾಧಿಪಗೃಹಸ್ಥಸ್ಯ ಗೃಹಂ ವವ್ರಾಜ ತತ್ರ ಸಃ ॥೧೧೦॥**

ಶ್ರೀರಾಘವೇಂದ್ರಗುರುಗಳು ಅಲ್ಲಿಂದ ಕಿರೀಟಾ ಎಂದು ಹೆಸರುಳ್ಳ ಪಟ್ಟಣಕ್ಕೆ ಹೋದರು. ಆ ಊರಿನಲ್ಲಿ ಶ್ರೀಗುರುಗಳು ಗ್ರಾಮಾಧಿಕಾರಿಯಾದ ಗೃಹಸ್ಥನ ಮನೆಗೆ ಹೋದರು.

**ದ್ವಾದಶ್ಯಾಂ ತು ಗೃಹಸ್ಥೋಽಸೌ ಭೋಜನಾರ್ಥಂ ಗುರೋರ್ಮುದಾ ।**
**ಅಸ್ರಾವಯಚ್ಚೂತರಸಂ ಮಹತ್ತ್ರಸುಭಾಜನೇ ॥೧೧೧॥**

ಈ ಗೃಹಸ್ಥನಾದರೋ ಸಂತೋಷದಿಂದ ದ್ವಾದಶೀತಿಥಿಯಲ್ಲಿ ಶ್ರೀರಾಯರ ಭೋಜನಕ್ಕೋಸ್ಕರ ದೊಡ್ಡದಾದ ಪಾತ್ರೆಯಲ್ಲಿ ಮಾವಿನ ಹಣ್ಣಿನ ರಸವನ್ನು ಹಿಂಡಿಸಿದನು.

**ಶತಾಧಿಕಬ್ರಾಹ್ಮಣೈಸ್ತು ಸಹಿತೇ ಶುದ್ಧಪಂಕ್ತಿಷು ।**
**ಭುಂಜಂತಿ ಶ್ರೀರಾಘವೇಂದ್ರೇ ರಸಮಾಮ್ರಸ್ಯ ಚಿಕ್ಷಿಪೇ ॥೧೧೨॥**

ನೂರಕ್ಕೂ ಹೆಚ್ಚಾದ ಬ್ರಾಹ್ಮಣರುಗಳಿಂದ ಕೂಡಿದ ಶುದ್ಧ ಪಂಕ್ತಿಯಲ್ಲಿ ಆದರೂ ಶ್ರೀರಾಘವೇಂದ್ರತೀರ್ಥರು ಭೋಜನಮಾಡುತ್ತಿರಲು ಮಾವಿನ ಹಣ್ಣಿನ ರಸವನ್ನು (ಬ್ರಾಹ್ಮಣರ ಎಲೆಗಳಲ್ಲಿ) ಬಡಿಸಿದ್ದು—

**ತದ್ರಸಂ ತು ಗೃಹಸ್ಥಸ್ಯ ಭಾರ್ಯಾ ಸಾ ಪರ್ಯವೇಷಯತ್ ।**
**ರಸಪಾತ್ರೇ ತದಾ ಪುತ್ರಂ ಮೃತಂ ದೃಷ್ಟ್ವಾಽಪತದ್ಭುವಿ ॥೧೧೩॥**

ಆ ಮಾವಿನ ರಸವನ್ನಾದರೋ ಗೃಹಸ್ಥನ ಆ ಹೆಂಡತಿಯು ಬಡಿಸಿದಳು. ಆಗ ಹಣ್ಣಿನ ರಸದ ಪಾತ್ರೆಯಲ್ಲಿ ಸತ್ತ ಮಗನನ್ನು ನೋಡಿ ಭೂಮಿಯಲ್ಲಿ ಬಿದ್ದಳು. (ಮೂರ್ಛಿತಳಾದಳು)

**ತತಃ ಖಿನ್ನಾಪಿ ಸಾಧ್ವೀತ್ವಾತ್ ಸ್ಫುಟಂ ನೈವ ರುರೋದ ಸಾ ।**
**ಬಹಿರ್ಗತ್ವಾ ಪತಿಂ ಪ್ರಾಪ್ಯಾದರ್ಶಯತ್ ಮೃತಬಾಲಕಮ್ ॥೧೧೪॥**

ಅನಂತರದಲ್ಲಿ ಆ ಗೃಹಸ್ಥನ ಹೆಂಡತಿಯು ದುಃಖಿತಳಾದಾಗ್ಯೂ ಸಾಧ್ವಿಯಾದ ಪ್ರಯುಕ್ತ ಗಟ್ಟಿಯಾಗಿ ರೋದಿಸಲಿಲ್ಲ. ಹೊರಗೆ ಹೋಗಿ ಗಂಡನನ್ನು ಹೊಂದಿ ಸತ್ತ ಮಗನನ್ನು ತೋರಿದಳು.

**ಪ್ರಾಶನಾರ್ಥಂ ಸುತೀರ್ಥಸ್ಯ ಗೃಹಸ್ಥಂ ತಂ ಸಮಾಹ್ವಯತ್ ।**
**ಯಯತುರ್ದಂಪತೀ ಬಾಲಂ ಗೃಹೀತ್ವಾ ಗುರುಸನ್ನಿಧಿಮ್ ॥೧೧೫॥**

(ಶ್ರೀಗುರುಗಳು ಭಿಕ್ಷೆಯನ್ನು ತೆಗೆದುಕೊಂಡು ತೀರ್ಥವನ್ನು ತೆಗೆದುಕೊಂಡ ಮೇಲೆ) ಪವಿತ್ರವಾದ ತೀರ್ಥವನ್ನು ತೆಗೆದುಕೊಳ್ಳಲೋಸುಗ ಆ ಗೃಹಸ್ಥನನ್ನು ಕರೆಯಿಸಿದರು. ದಂಪತಿಗಳು (ಮೃತನಾದ) ಹುಡುಗನನ್ನು ತೆಗೆದುಕೊಂಡು (ಎತ್ತಿಕೊಂಡು) ಶ್ರೀಗುರುಗಳ ಸನ್ನಿಧಿಗೆ ಪ್ರಯಾಣ ಮಾಡಿದರು.

**ತತ್ರ ಬಾಲಮಧಃಸ್ಥಾಪ್ಯ ಬಾಂಧವಾ ರುರುದುಸ್ತದಾ ।**
**ತತಸ್ತೀರ್ಥಂ ಬಾಲಕಸ್ಯೋಪರಿ ಸಂಪ್ರೋಕ್ಷ್ಯ ಸದ್ಗುರುಃ ॥೧೧೬॥**

ಶ್ರೀರಾಯರ ಸನ್ನಿಧಿಯಲ್ಲಿ ಹುಡುಗನನ್ನು ಕೆಳಗೆ ಇಟ್ಟು ಬಾಂಧವರು ಗಟ್ಟಿಯಾಗಿ ಅತ್ತರು. ಆಗ ಆ ಕಾಲದಲ್ಲಿ ಪೂಜ್ಯಶ್ರೀಗುರುಗಳು ಹುಡುಗನ ಮೇಲೆ ತೀರ್ಥವನ್ನು ಚೆನ್ನಾಗಿ ಸಿಂಪಡಿಸಿ—

**ಸರ್ವೇಷಾಂ ಹಿ ಸಮಕ್ಷಂ ತಂ ರಾಘವೇಂದ್ರಸ್ತ್ವಜೀವಯತ್ ।**
**ಉತ್ಥಿತಂ ಬಾಲಕಂ ದೃಷ್ಟ್ವಾ ಸರ್ವೇ ಸಂತೋಷಮಾಯಯುಃ ॥ ೧೧೭**

ಎಲ್ಲರ ಎದುರಿನಲ್ಲಿ ಶ್ರೀರಾಘವೇಂದ್ರರು ಆ ಹುಡುಗನನ್ನು ಬದುಕಿಸಿದರು. ಆಶ್ಚರ್ಯವು. ಆ ಸರ್ವರೂ ಎದ್ದ ಹುಡುಗನನ್ನು ನೋಡಿ ಸಂತುಷ್ಟಮನಸ್ಕರು ಆದರು.

**ನೇಮತುಸ್ತೌ ಪುತ್ರದಾತೃರಾಘವೇಂದ್ರಪದಾಂಬುಜೇ ।**
**ಮೃತಾರ್ಭಕೋಜ್ಜೀವಕಂ ತಂ ಶ್ರುತ್ವಾ ಪಾಷಾಣಧಾರಿಣಃ ।**
**ಆಹೂಯ ಬಾಲಕಂ ಸ್ವೀಯಂ "ತೂಷ್ಣೀಂ ತ್ವಂ ಭವ ಬಾಲಕ" ॥ ೧೧೮**

ಮಗನನ್ನು ಕೊಟ್ಟ ಶ್ರೀರಾಘವೇಂದ್ರತೀರ್ಥರ ಪಾದಕಮಲಗಳಿಗೆ ಆ ದಂಪತಿಗಳು ನಮಸ್ಕರಿಸಿದರು. ಲಿಂಗಾಯಿತರು ಸತ್ತ ಮಗನನ್ನು ಬದುಕಿಸಿದ ಆ ಶ್ರೀರಾಯರನ್ನು ಕೇಳಿ (ಶ್ರೀರಾಯರು ಸತ್ತ ಮಗನನ್ನು ಬದುಕಿಸಿದರು ಎನ್ನು ವುದನ್ನು ಕೇಳಿ) ತಮ್ಮ ಹುಡುಗನನ್ನು ಕರೆದು ಎಲ್ಲೈ ಹುಡುಗನೆ ಮಾತನಾಡದೆ ಇರು.

**ವಯಂ ಬ್ರೂಮೋ ಮೃತ ಇತಿ ಪರೀಕ್ಷಾರ್ಥಂ ಯತೇಃ ಪುರಃ ।**
**ಇತ್ಥಮುಕ್ತ್ವಾ ಬಾಲಕಂ ತಂ ಚೋಪವಿಶ್ಯ ಯಯುರ್ಯತಿಮ್ ॥೧೯॥**

ಶ್ರೀರಾಘವೇಂದ್ರಯತಿಗಳ ಮುಂದೆ ಪರೀಕ್ಷೆಗೋಸುಗ ಸತ್ತಿದ್ದಾನೆ ಎಂದು ನಾವುಗಳು ಹೇಳುವೆವು. ಹೀಗೆ ಹೇಳಿ ಆ ಹುಡುಗನನ್ನಾದರೋ ಕೂಡಿಸಿ ಶ್ರೀರಾಘವೇಂದ್ರಯತಿಗಳ ಹತ್ತಿರ ಹೋದರು.

**ಊಚಿರೇ ರಾಘವೇಂದ್ರಂ ತೇ ಖಿನ್ನಾ ಇವ ಜನಾಸ್ತದಾ ।**
**ನತ್ವಾ ನತ್ವಾ ವಿಲಪ್ಯೈತೇ ಹಾಹಾಕಾರಂ ಚ ಚಕ್ರಿರೇ ॥೧೨೦॥**

ಆಗ ಆ ಲಿಂಗಾಯಿತರು ದುಃಖಿತರಾದ ಜನರಂತೆ, ರೋದನಮಾಡುತ್ತಾ ಪುನಃಪುನಃ ನಮಸ್ಕರಿಸಿ ಹಾಹಾಕಾರವನ್ನು ಮಾಡಿದರು, ಹಾಗೂ ಅವರುಗಳು ಶ್ರೀರಾಘವೇಂದ್ರತೀರ್ಥರಿಗೆ ಹೇಳಿದರು.

**"ಗುರುವರ್ಯಾಸ್ಮದೀಯಂ ಚ ಬಾಲಂ ಜೀವಯ ಭೋ ಪ್ರಭೋ ।**
**ನಿರ್ನಿಮಿತ್ತಂ ಮೃತಂ ಪಶ್ಯೇ" ತ್ಯುಕ್ತ್ವಾ ತೇ ರುರುದುಸ್ತದಾ ॥೧೨೧॥**

ಹೇ ಸಮರ್ಥರಾದ ಗುರುಗಳೇ ! ಯಾವ ಕಾರಣವೂ ಇಲ್ಲದೇ ಸತ್ತಿರುವ ನಮ್ಮ ಹುಡುಗನನ್ನು ನೋಡಿ, ಮತ್ತು ಬದುಕಿಸಿ ಎಂದು ಹೇಳಿ ಆಗ ಅತ್ತರು.

**ತದ್ವಾಕ್ಯಂ ಗುರುವರ್ಯಃ ಸ ಶ್ರುತ್ವಾ ಗತ್ವಾ ಚ ತದ್ಗೃಹಮ್ ।**
**ಉಪವಿಷ್ಟಂ ಬಾಲಕಂ ತಂ ದೃಷ್ಟ್ವಾ ಮೇನೇ ಸುಜೀವಿತಮ್ ॥೧೨೨॥**

ಪ್ರಸಿದ್ಧರಾದ ಶ್ರೀಶ್ರೇಷ್ಠಗುರುಗಳು ಆ ಲಿಂಗಾಯಿತರ ವಾಕ್ಯವನ್ನು ಕೇಳಿ ಮತ್ತು ಅವರ ಮನೆಗೆ ಹೋಗಿ ಕುಳಿತಿರುವ ಆ ಹುಡುಗನನ್ನು ನೋಡಿ ಒಳ್ಳೇ ಜೀವಉಳ್ಳವನು (ಎಂದು) ತಿಳಿದರು.

**ಸತ್ಯಂ ಮೃತೋ ಯುಷ್ಮದೀಯಃ ಶಿಶುಸ್ತಸ್ಮಾದಹಂ ನರಾಃ ।**
**ಉಜ್ಜೀವನೇ ತ್ವಶಕ್ತೋ ವೈ ಶಠಾನಿತ್ಯವದದ್ಗುರುಃ ॥೧೨೩॥**

ಎಲೈ ಜನರೇ ! ನಿಮ್ಮ ಬಾಲಕನು ನಿಜವಾಗಿ ಸತ್ತಿರುವನು. ಕಾರಣ ಬದುಕಿಸುವುದರಲ್ಲಿ ನಿಶ್ಚಯವಾಗಿ ನಾನು ಶಕ್ತನಲ್ಲ ಎಂದು ಮೋಸಗಾರರನ್ನು ಕುರಿತು ಶ್ರೀಗುರುಗಳು ಹೇಳಿದರು.

**ಗೃಹಸ್ಥಸ್ಯ ಸುತಃ ಸೋಽಪಿ ನಿದ್ರಿತೋ ನ ಗತೋ ಮೃತಿಮ್ ।**
**ಅತಶ್ಚ ತಂ ವಿಪ್ರಸೂನುರ್ವಿತ್ತ ಪ್ರೋತ್ಥಾಪಿತಂ ಮಯಾ ॥೧೨೪॥**

ಗೃಹಸ್ಥನ ಆ ಕುವರನಾದರೋ ನಿದ್ರಿಸಲ್ಪಟ್ಟಿದ್ದನು. ಮರಣವನ್ನು ಹೊಂದಲಿಲ್ಲ. ಆ ಕಾರಣದಿಂದ ಆ ಬ್ರಾಹ್ಮಣಕುವರನು ನನ್ನಿಂದ ಎಬ್ಬಿಸಲ್ಪಟ್ಟನು (ಎಂದು ಹೇಳಿ ಅಲ್ಲಿಂದ ಹೊರಟರು).

**ಇತಿ ವಾಕ್ಯಂ ಮೂರ್ಖಜನಾಃ ಶ್ರುತ್ವಾ ಶ್ರೀಗುರಣೋದಿತಮ್ ।**
**ಹಾಸ್ಯಂ ಕೃತ್ವಾ ಶಿಶುಂ ಸ್ಪೃಷ್ಟ್ವಾ ಜೋತ್ತಿಷ್ಠೇತ್ಯೂಚಿರೇ ಮುದಾ ॥**

ಶ್ರೀಗುರುಗಳಿಂದ ಹೇಳಲ್ಪಟ್ಟ ಈ ರೀತಿಯ ವಾಕ್ಯವನ್ನು ಮೂರ್ಖ ಜನರು ಕೇಳಿ (ತಮ್ಮ ಪರೀಕ್ಷೆಯು ಜಯಪ್ರದವಾಯಿತು ಎಂಬ) ಸಂತೋಷದಿಂದ ಹಾಸ್ಯವನ್ನು ಮಾಡಿ ಆ ಹುಡುಗನನ್ನಾದರೂ ಮುಟ್ಟಿ ಏಳು ಎಂದು ಹೇಳಿದರು.

**ಸತ್ಯಂ ಮೃತಂ ಬಾಲಕಂ ಸ್ವಂ ದೃಷ್ಟ್ವಾ ದುಷ್ಟನರಾಸ್ತದಾ ।**
**ಪುನಃ ಶಿರಸ್ತು ಸಂತಾಡ್ಯ ರುರುದುರ್ಭೀತಮಾನಸಾಃ ॥೧೨೬॥**

ಆಗ ಭಯಗೊಂಡ ದುರ್ಜನರು ನಿಜವಾಗಿ ಸತ್ತ ತಮ್ಮ ಹುಡುಗನನ್ನು ನೋಡಿ ಮತ್ತು ತಲೆಯನ್ನು ಹೊಡೆದುಕೊಂಡು ಅತ್ತರು.

**ಏವಂ ಚರನ್ ಸ ಪೃಥಿವೀಂ ರಾಘವೇಂದ್ರಃ ಕೃಪಾನಿಧಿಃ ।**
**ಏಕಸ್ಮಿನ್ ದಿವಸೇ ಪ್ರಾಪ ಯಾದವಾನಾಂ ಪುರಂ ಗುರುಃ ॥೧೨೭॥**

ದಯಾಸಮುದ್ರರಾದ ಆ ಶ್ರೀರಾಘವೇಂದ್ರಗುರುಗಳು ಈ ರೀತಿಯ ಪವಾಡಗಳನ್ನು ತೋರಿಸುತ್ತ ಭೂಮಿಯನ್ನು ಸಂಚರಿಸುವವರಾಗಿ ಒಂದಾ

ನೊಂದು ದಿವಸದಲ್ಲಿ ಯಾದವರ ಪಟ್ಟಣವನ್ನು ಹೊಂದಿದರು. (ಆದವಾನಿ ಎಂಬ ಪಟ್ಟಣಕ್ಕೆ ಬಂದರು)

**ತತ್ರ ವಿದ್ವದ್ಬ್ರಾಹ್ಮಣೈಃಸ ಪತ್ತನಸ್ಥಜನೈಃ ಸಹ ।**
**ವೇಂಕಣ್ಣನಾಮಕಃ ಕಶ್ಚಿದ್ಭಿಕ್ಷಾರ್ಥಂ ಪ್ರಾರ್ಥಯದ್ಗುರುಂ ॥೧೨೮॥**

ಆ ಆದವಾನಿಯಲ್ಲಿ ಓರ್ವ ವೆಂಕಣ್ಣನೆಂಬಾತನು. ಪಂಡಿತ ಬ್ರಾಹ್ಮಣ ರಿಂದ, ಗ್ರಾಮಸ್ಥರಿಂದ ಕೂಡಿಕೊಂಡು (ಶ್ರೀಗುರುಗಳಲ್ಲಿಗೆ ಹೋಗಿ) ಭಿಕ್ಷಾ ಕ್ಕೋಸ್ಕರ (ಭೋಜನಕ್ಕಾಗಿ) ಶ್ರೀರಾಯರನ್ನು ಪ್ರಾರ್ಥಿಸಿದನು.

**ಗತ್ವಾ ತು ತದ್ಗೃಹಂ ತೇನ ಪ್ರಕ್ಷಾಲಿತಪದಾಂಬುಜಃ ।**
**ಕೃತವಾನ್ ಮಂದಿರಜನಾನ್ ತಪ್ತಮುದ್ರಾಂಕಿತಾನ್ ಗುರುಃ ॥೧೨೯॥**

ಶ್ರೀರಾಯರು ಆತನ ಮನೆಗೆ ಹೋಗಿ ವೆಂಕಣ್ಣನಿಂದ ತೊಳೆಯಲ್ಪಟ್ಟ ಪಾದಪದ್ಮಉಳ್ಳವರಾಗಿ ಮನೆಯ ಜನರನ್ನು ಕಾಯಿದ ಮುದ್ರೆಯ ಚಿಹ್ನೆ ಉಳ್ಳ ವರನ್ನು ಮಾಡಿದರು. (ವೆಂಕಣ್ಣನ ಮನೆಗೆ ಹೋಗಿ ಪಾದಪೂಜೆಯನ್ನು ಮಾಡಿಸಿಕೊಂಡು ಎಲ್ಲರಿಗೂ ಮುದ್ರೆಯನ್ನು ಹಾಕಿದರು).

**ಅನಂತರಂ ಗುರುಶ್ರೇಷ್ಠಃಪ್ರೋಚೇ ವೇಂಕಣ್ಣನಾಮಕಂ ।**
**ದಿವಾನೇತಿ ಪದಂ ಪ್ರಾಪ್ತಂ ಸರ್ವಾಸಾಧ್ಯಂ ಕಥಂ ತ್ವಯಾ ॥೧೩೦॥**

ಆ ಮೇಲೆ ಶ್ರೀಗುರುಶ್ರೇಷ್ಠರು ವೆಂಕಣ್ಣನನ್ನು (ಕರೆದು) ಎಲ್ಲರಿಗೆ ಸಾಧ್ಯ ವಾಗದ **ದಿವಾನ್** ಎಂಬ ಪದವಿಯು ನಿನ್ನಿಂದ ಹೇಗೆ ಹೊಂದಲ್ಪಟ್ಟಿತು ಎಂದು ಕೇಳಿದರು.

**ಇತಿ ಪೃಷ್ಟೋ ಗೃಹಸ್ಥಸ್ತು 'ಭವತ್ಪಾದಾಬ್ಜಸಂಸ್ಮೃತೇಃ ।**
**ತನ್ಮಯಾ ಲಬ್ಧ'ಮಿತಿ ಚ ಪ್ರೋಚೇ ವೇಂಕಣ್ಣನಾಮಕಃ ॥೧೩೧॥**

ಈ ರೀತಿಯಾಗಿ ಪ್ರಶ್ನಿಸಲ್ಪಟ್ಟ ಗೃಹಸ್ಥನಾದ ವೆಂಕಣ್ಣನು ತಮ್ಮ ಪಾದ ಕಮಲಗಳ ಸಂಸ್ಮರಣೆಯಿಂದ ಆ ದಿವಾನಪದವಿಯು ನನ್ನಿಂದ ಹೊಂದಲ್ಪಟ್ಟಿತು, ಎಂದು ಹೇಳಿದನು.

**"ಶೃಣು ತದ್ಗುರುವರ್ಯ! ತ್ವಂ ವಿಸ್ತರೇಣೋಚ್ಯತೇ ಮಯಾ ।**
**ಭವತ್ಪಾದಾನುಗ್ರಹಂ ತು ವರ್ಣಯಾಮಿ ಸುಭಕ್ತಿತಃ ॥೧೩೨॥**

ಹೇ ಗುರುವರ್ಯ! ಆ ದಿವ್ಯಾವತಾರದವಿಷಯ ಸಮಾಚಾರವು ನನ್ನಿಂದ ವಿಸ್ತಾರವಾಗಿ ಹೇಳಲ್ಪಡುತ್ತದೆ. ಅತ್ಯಂತ ಭಕ್ತಿಯಿಂದ, ತಮ್ಮ ಪಾದಾನುಗ್ರಹವನ್ನು ಬಣ್ಣಿಸುವೆ, ತಾವು ಕೇಳಿ (ಎಂದನು).

**ಅಸ್ಮಿನ್ ಪುರೇ ಚ ವಾಸೋಽಭೂತ್ ಬಾಲ್ಯೇ ಮಾತುಲಸದ್ಮನಿ ।**
**ಗೋರಕ್ಷಿತುರ್ಮೇ ಪಿತರೌ ಶೈಶವೇ ತು ದಿವಂ ಗತೌ ॥೧೩೩॥**

ಬಾಲ್ಯದಲ್ಲಿ ಈ ಪಟ್ಟಣದಲ್ಲೇ ಸೋದರಮಾವನ ಮನೆಯಲ್ಲಿ ಇದ್ದೆನು. ಆಕಳನ್ನು ಕಾಯುವ ನನ್ನ, ತಂದೆ ತಾಯಿಗಳು (ನಾ) ಹುಡುಗನಿರುವಾಗಲೇ ಸ್ವರ್ಗಸ್ಥರಾದರು.

**ಏಕಸ್ಮಿನ್ ದಿವಸೇ ವರ್ಯ ಪಶುಪಾಲನಕರ್ಮಣಿ ।**
**ಶ್ರಾಂತಸ್ಸನ್ ವಟವೃಕ್ಷಸ್ಯ ಮೂಲೇ ನಿದ್ರಾಂ ಗತೋಽಸ್ಮ್ಯಹಂ ॥೧೩೪॥**

ಹೇ ಶ್ರೇಷ್ಠರೇ! ಒಂದಾನೊಂದು ದಿನದಲ್ಲಿ ನಾನು ಆಕಳನ್ನು ಕಾಯುವ ಕೆಲಸದಲ್ಲಿ ದಣಿದವನಾಗಿ ವಟವೃಕ್ಷದ ಅಡಿಯಲ್ಲಿ ನಿದ್ರೆಯನ್ನು ಹೊಂದಿದೆನು.

**ಸರ್ಪಶ್ರೇಷ್ಠಃ ಶಿರಸ್ಥಾನೇ ಚಿಕ್ರೀಡೇ ಮೇ ಮುದಾ ತದಾ ।**
**ದೃಷ್ಟ್ವಾ ಸರ್ಪಂ ಧೇನುಪಾಲಾ ಗತ್ವಾ ಗೇಹಂ ನ್ಯವೇದಯನ್ ॥೧೩೫॥**

ಆಗ ನಾಗರಹಾವು ನನ್ನ ತಲೆಯ ಮೇಲೆ ಸಂತೋಷದಿಂದ ಆಡಿತು. ಆಕಳುಕಾಯುವವರು ಹಾವನ್ನು ನೋಡಿ ಮನೆಗೆ ತೆರಳಿ ಹೇಳಿದರು.

**ಮಾತುಲಾಯ ಭೀತಾಸ್ತೇ ಮೃತಸ್ತೇ ಭಾಗಿನೇಯಕಃ ।**
**ಸ ತಚ್ಛ್ರುತ್ವಾ ಮಾತುಲಸ್ತು ಭೀತಸ್ಸನ್ ಸತ್ವರಂ ಯಯೌ ॥೧೩೬॥**

ಹೆದರಿದ ಅವರುಗಳು ನಮ್ಮ ಸೋದರಮಾವನಿಗೆ ನಿಮ್ಮ ತಂಗಿಯ ಮಗನು ಸತ್ತನು (ಎಂದು ಹೇಳಿದರು). ಆ ಸೋದರಮಾವನಾದರೋ ಅದನ್ನು ಕೇಳಿ ಭಯಪಟ್ಟವನಾಗಿ ಶೀಘ್ರವಾಗಿ ಹೊರಟನು.

**ತತ್ರ ದೃಷ್ಟ್ವಾ ನಿದ್ರಿತಂ ತು ಪ್ರೋತ್ಥಾಪ್ಯ ಗತವಾನ್ ಗೃಹಮ್ ।**
**ಏವಂ ಕಾಲಂ ನಯಂತಂ ಮಾಂ ತೀರ್ಥಯಾತ್ರಾಂ ಚರನ್ ಗುರೋ ॥**

ಅಲ್ಲಿ ಮಲಗಿದವನನ್ನಾದರೂ ನೋಡಿ ಎಬ್ಬಿಸಿ ಮನೆಗೆ ಹೋದನು. ಹೇ ಗುರುಗಳೇ ! ಈ ರೀತಿಕಾಲವನ್ನು ಕಳೆಯುವ ನನ್ನನ್ನು (ಆಕಳುಗಳನ್ನು ಕಾಯುತ್ತಾ ಕಾಲವನ್ನು ಕಳೆಯುವ ನನ್ನನ್ನು) ತೀರ್ಥಯಾತ್ರೆಯನ್ನು ಮಾಡುತ್ತಾ —

**ಏತತ್ಗ್ರಾಮಂ ತ್ವಮಾಗತ್ಯ ಕೃತವಾನ್ ಮಾಂ ಸಮುದ್ಧೃತಂ ।**
**ಆಯಾಸ್ಯತಿ ಯದಾಽಪತ್ತೇ ತದಾಽಸ್ಮರ ಪದೌ ಮಮ ।**
**ತ್ವಂ ತೇನ ಧೂತಾಽಪದ್ಭೂತ್ವಾ ಶ್ರೀಮಾನಪಿ ಭವಿಷ್ಯಸಿ ॥೧೩೬॥**

ತಾವು ಈ ಊರಿಗೆ ಬಂದು ನನ್ನನ್ನು ಉದ್ಧೃತನನ್ನು ಮಾಡಿದವರಾಗಿ, ಯಾವಾಗ ಆಪತ್ತು ಬರುವುದೋ ಆಗ ನನ್ನ ಪಾದಗಳನ್ನು ಸ್ಮರಿಸು. ಆದರಿಂದ ನೀನು ಹೋಗಲ್ಪಟ್ಟ ಆಪತ್ತುಳ್ಳವನಾಗಿ ಸಂಪದುಳ್ಳವನು (ಶ್ರೀಮಂತನು) ಆಗುವಿ.

**ಇತ್ಯುಕ್ತ್ವಾ ತ್ವಂ ಗುರುಶ್ರೇಷ್ಠ ಪೂರ್ವದೇಶಂ ಗತೋಽಸಿ ಭೋ ।**
**ಕಸ್ಮಿನ್ ದಿನೇ ಮ್ಲೇಂಛರಾಜೋ ಹ್ಯೇತನ್ನಗರಮಾಪ್ತವಾನ್ ॥೧೩೭॥**

ಈ ರೀತಿಯಾಗಿ ಹೇಳಿ ಭೋ ಗುರುವರ್ಯ! ತಾವು ಪೂರ್ವದೇಶಕ್ಕೆ ಹೋದವರಾದಿರಿ. ಒಂದಾನೊಂದು ದಿನದಲ್ಲಿ ತುರುಷ್ಕರಾಜನು (ಮುಸಲ್ಮಾನ ರಾಜನು) ಈ ಪಟ್ಟಣವನ್ನು ಹೊಂದಿದನು (ಪಟ್ಟಣಕ್ಕೆ ಬಂದನು).

**ಆಗತಂ ತಂ ನೃಪಂ ದ್ರಷ್ಟುಂ ಯಯುಃಪತ್ತನವಾಸಿನಃ ।**
**ತೇಷಾಂ ಮಧ್ಯೇ ಗುರುಶ್ರೇಷ್ಠಂ ನೃಪಂ ದ್ರಷ್ಟುಂ ಗತೋಽಸ್ಮ್ಯಹಮ್ ॥**

ಬಂದಿರುವ ಆ ಅರಸನನ್ನು ನೋಡಲು ಪಟ್ಟಣವಾಸಿಗಳು (ಪಟ್ಟಣಿಗರು) ಹೋದರು. ಪೂಜ್ಯ ಗುರುಗಳೇ ಅವರುಗಳ ಮಧ್ಯದಲ್ಲಿ ನಾನೂ ರಾಜನನ್ನು ನೋಡಲು ಹೋಗಿದ್ದೆನು.

**ತಸ್ಮಿನ್ ಕಾಲೇ ಪತ್ತನಂ ತದ್ದೇವಲೋಕ ಇವಾಬಭೌ ।**
**ನೃಪೇ ಹಸ್ತಿನಮಾರುಹ್ಯ ಸತ್ಯಾಯಾತಿ ಮಹಾಪಥೇ ॥೧೪೦॥**

ಆ ಕಾಲದಲ್ಲಿ ಆ ಪಟ್ಟಣವು ಸ್ವರ್ಗದಂತೆ ಇದ್ದಿತು. ರಾಜನು ಆನೆಯನ್ನು ಏರಿ ದೊಡ್ಡ ಬೀದಿಯಲ್ಲಿ ಬರುತ್ತಿರಲು—

**ಭೃತ್ಯೋ ನೃಪಾರ್ಥಂ.ಪತ್ರಂ ಚ ಶೀಘ್ರದರ್ಶನಚಿಹ್ನವತ್ ।**
**ಪತ್ರವಾಹಕ ಆಗತ್ಯ ಸ್ಥಿತ್ವಾ ರಾಜ್ಞೋಗ್ರತಸ್ತದಾ ।**
**ನತ್ವಾ ತು ದತ್ತವಾನ್ ತಸ್ಮೈ ಭೂಪಸಂಮೋದಕಾರಕಮ್ ॥೧೪೨॥**

ಆಗ ಪತ್ರವನ್ನು ತರುವ ಸೇವಕನು ಮಹಾರಾಜನಿಗೋಸ್ಕರ ಬೇಗನೆ ನೋಡುವ ಚಿಹ್ನೆಯುಳ್ಳ ರಾಜನಿಗೆ ಸಂತೋಷವನ್ನುಂಟುಮಾಡುವ ಪತ್ರವನ್ನಾದರೋ (ತೆಗೆದುಕೊಂಡು) ಬಂದು ಅರಸನ ಎದುರಿನಲ್ಲಿ ನಿಂತು ನಮಸ್ಕರಿಸಿ ರಾಜನಿಗೆ ಕೊಟ್ಟನು.

**ರಾಜಾ ಪತ್ರಂ ಗೃಹೀತ್ವಾ ತು ಸಮಂತಾದವಲೋಕಯನ್ ।**
**ಮಾಮೇವ ಸ್ವಸಮೀಪಸ್ಥಮಪಶ್ಯದ್ಬ್ರಹ್ಮಯೋನಿಜಂ ॥೧೪೩॥**

ರಾಜನಾದರೋ ಪತ್ರವನ್ನು ತೆಗೆದುಕೊಂಡು ಸುತ್ತಲೂ ನೋಡಿದವನಾಗಿ ತನ್ನ ಹತ್ತಿರದಲ್ಲಿ ನಿಂತಿರುವ ಬ್ರಾಹ್ಮಣನಾದ ನನ್ನನ್ನೇ ನೋಡಿದನು.

**ರಾಜಾ ದೂತಂ ಸಮಾಹೂಯ "ಗಜೇ ತಂ ತ್ವಂ ನಿವೇಶಯ" ।**
**ಇತ್ಯುಕ್ತೋ ರಾಜದೂತಸ್ತದ್ಗಜೇ ತ್ವಾರೋಪಯದ್ಧಿ ಮಾಂ ॥೧೪೪॥**

ದೊರೆಯು ದೂತನನ್ನು ಕರೆದು ನೀನು ಆನೆಯ ಮೇಲೆ ಆ ಬ್ರಾಹ್ಮಣನನ್ನು ಕೂಡಿಸು. ಈ ರೀತಿಯಾಗಿ ಹೇಳಿಸಿಕೊಳ್ಳಲ್ಪಟ್ಟ ರಾಜದೂತನಾದರೋ ನನ್ನನ್ನು ಆ ಆನೆಯ ಮೇಲೆ ಕೂಡಿಸಿದನು.

**ತತಃಪತ್ರಂ ಚ ಮದ್ಧಸ್ತೇ ದತ್ವಾ ಪ್ರೋಚೇ ಚ ಮಾಂ ಪ್ರಭುಃ ।**
**ಪತ್ರಾರ್ಥಂ ತ್ವಂ ಬೋಧಯ ಮಾಂ ನ ಚೇತ್ತ್ವಾಂ ಹನ್ಮಿ**
**ಸಾಂಪ್ರತಮ್ ॥೧೪೫॥**

ಅನಂತರದಲ್ಲಿ ರಾಜನು ಪತ್ರವನ್ನು ನನ್ನ ಕೈಯಲ್ಲಿ ಕೊಟ್ಟು ನೀನು ಪತ್ರದ ಅರ್ಥವನ್ನು ನನಗೆ ತಿಳಿಸು, ತಿಳಿಸದೇ ಇದ್ದ ಪಕ್ಷದಲ್ಲಿ ಈಗ ನಿನ್ನನ್ನು ಕೊಲ್ಲುವೆ ಎಂದು ಹೇಳಿದನು.

**ಇತ್ಯುಕ್ತೋಽಹಂ ಮೂರ್ಖತಮೋ ಬಹುಚಿಂತಾಮವಾಪ್ನುವಮ್ ।**
**ತದಾ ತವ ಪದಂ ಸ್ಮೃತ್ವಾ ಜ್ಞಾತ್ವಾ ಸ್ವಾರ್ಥಂ ನ್ಯವೇದಯನ್ ॥೧೪೬**

ಈ ರೀತಿಯಾಗಿ ಹೇಳಿಸಿಕೊಳ್ಳಲ್ಪಟ್ಟ ಅತ್ಯಂತಮೂರ್ಖನಾದ (ಓದು ಬರವೆ ಇರುವ) ನಾನು ಬಹಳ ಚಿಂತೆಯನ್ನು ಹೊಂದಿದೆನು. ಆಗ ತಮ್ಮ ಪಾದ ವನ್ನು ನೆನೆದು ಆ ಪತ್ರಾರ್ಥವನ್ನು ತಿಳಿದು ಅರುಹಿದೆನು.

**ಸಾಮ್ರಾಜ್ಯಜಯವೃತ್ತಾಂತಂ ಶ್ರುತ್ವಾ ಮಮ ಮುಖಾನ್ನೃಪಃ ।**
**ತುಷ್ಟಸ್ತದೈವ ರಾಜಾ ತು ಶುಭವೃತ್ತವದಾಯ ಸಃ ॥೧೪೭॥**

ಆ ರಾಜನು ಸಾಮ್ರಾಜ್ಯಜಯದ ವೃತ್ತಾಂತವನ್ನು ನನ್ನ ಬಾಯಿಂದ ಕೇಳಿ ಸಂತುಷ್ಟನಾದನು. ಆಗಲೇ ರಾಜನಾದರೋ ಒಳ್ಳೆಯ ಸಮಾಚಾರ ವನ್ನು ಹೇಳಿದ ನನಗೆ—

**ಏತನ್ಮಹ್ಯಂ ದದೌ ಸ್ವಾಮಿನ್ ದಿವಾನಪದಮುತ್ತಮಮ್ ।**
**ಏವಮುಕ್ತ್ವಾ ಸ ವೇಂಕಣ್ಣೋ ಗುರವೇ ದರ್ಶಯನ್ ಗೃಹಮ್ ।**
**ಏತದ್ವಸ್ತು ಸಮಸ್ತಂ ಚ ಶ್ರೀಮತಾಮೇವ ಮೇ ನ ತು ॥೧೪೮॥**

ಶ್ರೀಗಳವರೇ ! ಈ ಉತ್ತಮವಾದ ದಿವಾನಪದವಿಯನ್ನು ನನಗೋಸ್ಕರ (ನನಗೆ) ಕೊಟ್ಟನು. ಹೀಗೆ ಹೇಳಿ ಆ ವೆಂಕಣ್ಣನು ಶ್ರೀಗುರುಗಳಿಗೆ ಮನೆಯನ್ನು ತೋರಿಸುವವನಾಗಿ ಈ ಎಲ್ಲ ವಸ್ತುವೂ ಶ್ರೀಗಳವರದೇ ನನ್ನದಾವುದೂ ಇಲ್ಲ—

**ಇತಿ ಬದ್ಧಾಂಜಲಿರ್ಭೂತ್ವಾ ತಂ ನನಾಮ ಸ ವೇಂಕಟಃ ।**
**ಭಿಕ್ಷಾಂ ಚ ಕಾರಯಾಮಾಸ ಸರ್ವಸ್ಯಾಶ್ಚರ್ಯಕಾರಿಣೀಮ್ ॥೧೪೯॥**

ಹೀಗೆಂದು (ಹೇಳಿ) ಆ ವೆಂಕಣ್ಣನು ಕೈ ಜೋಡಿಸಿದವನಾಗಿ ಆ ಶ್ರೀಗುರು ರಾಘವೇಂದ್ರರಿಗೆ ನಮಸ್ಕರಿಸಿದನು. ಮತ್ತು ಎಲ್ಲರಿಗೆ ಆಶ್ಚರ್ಯಕರವಾದ ಭಿಕ್ಷೆಯನ್ನು ಮಾಡಿಸಿದನು.

**ಭೋಜನಾನಂತರಂ ರಾಜ್ಞೋ ಗೃಹಂ ಗತ್ವಾ ನ್ಯವೇದಯತ್ ।**
**ತ್ರಿಕಾಲಜ್ಞೋ ರಾಘವೇಂದ್ರ ಆಗತಸ್ತೇ ಪುರಂ ಕ್ಷಿತಿ ॥೧೫೦॥**

ಊಟವಾದಮೇಲೆ ಅರಸನ ಮನೆಗೆ ಹೋಗಿ ಭೂತಭವಿಷ್ಯದ್ವರ್ತಮಾನ ಕಾಲದ ಜ್ಞಾನವುಳ್ಳ ಶ್ರೀರಾಘವೇಂದ್ರತೀರ್ಥರು ನಿನ್ನ ಪಟ್ಟಣಕ್ಕೆ ಬಂದಿರುವರು ಎಂದು ಹೇಳಿದನು.

**ಮ್ಲೇಂಛರಾಜೋಽಪಿ ತಚ್ಛ್ರುತ್ವಾ ಮಾಹಾತ್ಮ್ಯಂ ವದ ವಿಸ್ತರಂ ।**
**ಇತಿ ರಾಜ್ಞಾ ಸುಪೃಷ್ಟಸ್ಸನ್ ಗುರೋರ್ವೃತ್ತಂ ಜಗಾದ ಸಃ ॥೧೫೦॥**

ತುರುಷ್ಕರಾಜನೂ ಕೂಡ ವೆಂಕಣ್ಣನ ವಾಕ್ಯವನ್ನು ಕೇಳಿ ಶ್ರೀಗುರುಗಳ ಮಾಹಾತ್ಮ್ಯೆಯನ್ನು ವಿಶದವಾಗಿ ಹೇಳು, ಹೀಗೆಂದು ಅರಸನಿಂದ ಪ್ರಶ್ನಿತನಾಗಿ ಆ ವೆಂಕಣ್ಣನು ಶ್ರೀರಾಯರ ಚರಿತ್ರೆಯನ್ನು ಹೇಳಿದನು.

**ಸರ್ವಂ ಶ್ರುತ್ವಾ ಮ್ಲೇಂಛರಾಜೋ ಮಯಾ ತತ್ಸುಪರೀಕ್ಷ್ಯತೇ ।**
**ಇತ್ಯುಕ್ತ್ವಾ ಸ ಮಸೋತ್ಖಾನ್ ಹಿ ಗ್ರಾಹಯಿತ್ವಾಽಜಮಾಂಸಕಂ ॥೧೫೧**

"ಮಸೋತ್ಖಾನ್" ಎಂಬ ಆ ತುರುಷ್ಕರಾಜನು ಎಲ್ಲವನ್ನು ಕೇಳಿ ಆ ಗುರುಗಳ ಮಹಿಮೆಯು ನನ್ನಿಂದ ನಿಶ್ಚಯವಾಗಿ ಪರೀಕ್ಷಿಸಲ್ಪಡುತ್ತದೆ. (ಶ್ರೀಗುರುಗಳನ್ನು ನಾನು ಚೆನ್ನಾಗಿ ಪರೀಕ್ಷಿಸುವೆ) ಎಂದು ಹೇಳಿ ಮೇಕೆಯ ಮಾಂಸವನ್ನು ತರಿಸಿ—

**ಗುರೋಃಸಮೀಪಂ ಸಂಪ್ರಾಪ್ಯ ಗುರುಂ ನತ್ವಾ ತದಾಽವದತ್ ।**
**ನಿವೇದಯ ಶ್ರೀರಾಮಾಯ ಮಯಾನೀತಂ ಫಲಾದಿಕಮ್ ॥೧೫೨॥**

ಆಗ ಶ್ರೀಗುರುಗಳ ಹತ್ತಿರ ಬಂದು ಶ್ರೀರಾಯರಿಗೆ ನಮಸ್ಕರಿಸಿ ಶ್ರೀರಾಮ ದೇವರಿಗೆ ನನ್ನಿಂದ ತರಲ್ಪಟ್ಟ ಹಣ್ಣು ಮೊದಲಾದುವುಗಳನ್ನು ಅರ್ಪಿಸಿ ಎಂದು ಹೇಳಿದನು. ಇದು ಪ್ರಸಿದ್ಧವು.

**ಇತ್ಯುಕ್ತೋ ಗುರುವರ್ಯಸ್ತಂ 'ತಥಾಸ್ತ್ವಿತಿ' ಮುದಾಽವದತ್ ।**
**ಸಾಯಾಹ್ನಿಕಂ ಸಮಾಪ್ಯಾಥ ಜಲಂ ಪ್ರೋಕ್ಷ್ಯಾಽವದದ್ಗುರುಃ ॥೧೫೩॥**

ಈ ರೀತಿ ಹೇಳಿಸಿಕೊಳ್ಳಲ್ಪಟ್ಟ ಶ್ರೀಗುರುವರ್ಯರು ಸಂತೋಷದಿಂದ 'ಹಾಗೇ ಆಗಲಿ' ಎಂದು ಹೇಳಿದರು. ಅನಂತರದಲ್ಲಿ ಶ್ರೀರಾಯರು ಸಂಜೆಯ ಆಹ್ನಿಕವನ್ನು ಮುಗಿಯಿಸಿ ನೀರನ್ನು ಅದರ ಮೇಲೆ ಸಿಂಪಡಿಸಿ ಹೇಳಿದರು.

ಆಚ್ಛಾದಿತಂ ಪಟ್ಟವಸ್ತ್ರಂ ದೂರಂ ಪ್ರಕ್ಷಿಪ ಸೇವಕ ।
ಗುರುವಾಕ್ಯೇನ ವಸನಂ ನಿವಾರಯತಿ ಶಿಷ್ಯಕೇ ॥೧೫೫॥

ಎಲೈ ಶಿಷ್ಯನೇ! (ಆ ಪದಾರ್ಥದ ಮೇಲೆ) ಹೊದಿಸಿದ ಪೀತಾಂಬರ ವನ್ನು ದೂರದಲ್ಲಿಡು (ತೆಗಿ). ಶಿಷ್ಯನು ಶ್ರೀಗುರುಗಳ ವಾಕ್ಯದಿಂದ ಬಟ್ಟೆಯನ್ನು (ಪೀತಾಂಬರವನ್ನು) ತೆಗೆಯುತ್ತಿರಲು—

ರಾಜಾ ಫಲಸುಮಂ ದೃಷ್ಟ್ವಾ ಸವಿಸ್ಮಯಮನಾಃಸ್ಥಿತಃ ।
ಬದ್ಧಾಂಜಲಿಪುಟೋ ಭೂತ್ವಾ ಗುರುವರ್ಯ ಮುವಾಚ ಸಃ ॥೧೫೬॥

ಆ ಅರಸನು ಹಣ್ಣುಹೂವನ್ನು ನೋಡಿ (ಮೇಕೆಯ ಮಾಂಸವು ಹೋಗಿ ಹಣ್ಣುಹೂವು ಆದದ್ದನ್ನು ನೋಡಿ) ಆಶ್ಚರ್ಯಯುಕ್ತಮನಸ್ಸುಳ್ಳವನಾಗಿ ಶ್ರೀರಾಯರಿಗೆ ಕೈಜೋಡಿಸಿದವನಾಗಿ ಮಾತನಾಡಿದನು.

ಕ್ಷಮ್ಯತಾಂ ಭೋ ತ್ರಿಕಾಲಜ್ಞಾಽಪರಾಧೋಽಯಂ ಮಯಾ ಕೃತಃ ।
ಇತ್ಯುಕ್ತವಂತಂ ರಾಜಾನಂ ವಾಕ್ಯೇನಾತೋಷಯದ್ಗುರುಃ ॥೧೫೭॥

ಹೇ! ಮೂರುಕಾಲದ ಜ್ಞಾನವುಳ್ಳ ಗುರುಗಳೇ! ನನ್ನಿಂದ ಮಾಡಲ್ಪಟ್ಟ ಈ ಅಪರಾಧವು ಕ್ಷಮಿಸೋಣವಾಗಲಿ, ಈ ರೀತಿಯಾಗಿ ಪ್ರಾರ್ಥಿಸಿದ ರಾಜನನ್ನು ಶ್ರೀರಾಯರು ಸಂತೋಷಪಡಿಸಿದರು.

ಸ್ವಾರ್ತಿಕ್ಯಾನಂತರಂ ಭೂಪಃಪ್ರಾಪ್ಯ ಮಂತ್ರಾಕ್ಷತಾದಿಕಾನ್ ।
ವೇಂಕಣ್ಣೇನ ತ್ವಮಾತ್ಯೇನ ಸಾರ್ಧಂ ಗೇಹಂ ಯಯೌ ಮುದಾ ॥೧೫೮॥

ಭೂಪತಿಯು ಮಂಗಳಾರತಿಯು ಆದಮೇಲೆ ಫಲಮಂತ್ರಾಕ್ಷತೆಗಳನ್ನು ಹೊಂದಿ ಮಂತ್ರಿಯಾದ ವೆಂಕಣ್ಣನಿಂದ ಕೂಡಿಕೊಂಡು ಸಂತಸದಿ ಮನೆಗೆ ಹೋದನು.

ರಾಘವೇಂದ್ರಾಯ ಕಿಂ ದೇಯಂ ವದ ವೇಂಕಣ್ಣ ಸದ್ದ್ವಿಜ ।
ರಾಜ್ಞೇತ್ಯುಕ್ತಃ ಸ ವೇಂಕಣ್ಣೋ ವಕ್ಷ್ಯೇ ವಿಜ್ಞಾಪ್ಯ ಶ್ರೀಗುರೌ ॥೧೫೯॥

ದ್ವಿಜಶ್ರೇಷ್ಠವೆಂಕಣ್ಣನೇ! ಶ್ರೀರಾಘವೇಂದ್ರತೀರ್ಥರಿಗೆ ಏನು ಕೊಡಲಿ

ಎಂದು ಮಹಾರಾಜನಿಂದ ಪ್ರೇಷ್ಯನಾದ ಆ ವೆಂಕಣ್ಣನು ಶ್ರೀರಾಯರಲ್ಲಿ ವಿಜ್ಞಾಪಿಸಿ (ಶ್ರೀರಾಯರನ್ನು ಕೇಳಿ) ಹೇಳುವೆ.

**ಇತ್ಯುಕ್ತ್ವಾ ಸ ಗುರುಂ ಪ್ರಾಪ್ಯ ರಾಜಹೃದ್ಯಂ ನ್ಯವೇದಯತ್ ।**
**ತಚ್ಛ್ರುತ್ವಾ ತು ಗುರುಸ್ತಸ್ಮಾನ್ಮಂತ್ರಾಲಯಮಿಮಯೋಕ್ಷ ಸಃ ॥೧೬೦॥**

ಈ ರೀತಿ ಹೇಳಿ ಆ ವೆಂಕಣ್ಣನು ಶ್ರೀಗುರುಗಳನ್ನು ಹೊಂದಿ (ಶ್ರೀಗುರುಗಳಲ್ಲಿಗೆ ಬಂದು) ರಾಜನ ಅಭಿಪ್ರಾಯವನ್ನು ತಿಳಿಸಿದನು. ಅದನ್ನು ಕೇಳಿ ಆ ಶ್ರೀರಾಯರು ಅವನಿಂದ (ಅರಸನಿಂದ) ಮಂತ್ರಾಲಯವನ್ನು ಅಪೇಕ್ಷಿಸಿದರು.

**ಗುರೋರಿಚ್ಛಾಂ ದ್ವಿಜಾಚ್ಛ್ರುತ್ವಾ ವಿಹಸ್ಯ ಪ್ರಾಬ್ರವೀದ್ಧಿ ರಾಟ್ ।**
**ಯಾದವಾನಾಂ ಪುರಂ ಗ್ರಾಹ್ಯಂ ಶ್ರೇಷ್ಠತ್ವಾದ್ಗುರುಣಾತ್ವಿತಿ ॥೧೬೧॥**

ದೊರೆಯು ಬ್ರಾಹ್ಮಣನಿಂದ ಶ್ರೀಗುರುಗಳ ಇಚ್ಛೆಯನ್ನು ಕೇಳಿ ನಕ್ಕು ಉತ್ತಮತ್ವವುಳ್ಳ ಶ್ರೀಗುರುಗಳಿಂದ ಯಾದವರ ಪಟ್ಟಣವು (ಆದವಾನಿಗ್ರಾಮವು) ಸ್ವೀಕರಿಸಲು ಯೋಗ್ಯವು ಎಂದು ಹೇಳಿದನು.

**ಅ. ವಿ. :**— ಶ್ರೀಗುರುಗಳ ಮಹಾತ್ಮೆಗೆ ಬೆರಗಾದ ಅರಸನು, ಮಂತ್ರಾಲಯವು ಚಿಕ್ಕಗ್ರಾಮವು, ವರಮಾನವು ಕಡಿಮೆ, ಹೆಚ್ಚು ಆದಾಯವುಳ್ಳ, ಈ ಆದವಾನಿಯನ್ನು ತೆಗೆದುಕೊಳ್ಳಲಿ ಎಂದು ಹೇಳಿದನು.

**ರಾಜೋಕ್ತಂ ತು ದ್ವಿಜಾಚ್ಛ್ರುತ್ವಾ ಹ್ಯಬ್ರವೀದ್ಗುರುರಾಟ್ಸ್ವಯಂ ।**
**ಮಂತ್ರಾಲಯೇ ಕೃತೋ ಯಜ್ಞಃಪೂರ್ವಂ ಪ್ರಹ್ಲಾದಧೀಮತಾ ।**
**ತಸ್ಮಾತ್ಪೂತಃಸ ತು ಗ್ರಾಮ ಅತ ಏವಾಽಭಿಕಾಂಕ್ಷಿತಃ ॥೧೬೨॥**

ಬ್ರಾಹ್ಮಣನಿಂದ ರಾಜನ ಹೇಳಿಕೆಯನ್ನು ಕೇಳಿ ಶ್ರೀಗುರುಸಾರ್ವಭೌಮರು ತಾವೇನೇ ಹೇಳಿದರು. ಪೂರ್ವದಲ್ಲಿ ಕುಶಲಿಯಾದ ಪ್ರಹ್ಲಾದನಿಂದ ಮಂತ್ರಾಲಯದಲ್ಲಿ ಯಾಗವು ಮಾಡಲ್ಪಟ್ಟಿತು. ಆ ಕಾರಣದಿಂದ ಆ ಗ್ರಾಮವಾದರೋ ಪವಿತ್ರವಾದದ್ದು ಅದಕ್ಕಾಗಿಯೇ ಅಪೇಕ್ಷಿಸಿದುದು.

**ನಿವೇದ್ಯ ತೇನ ರಾಜ್ಞೈವ ಮಂತ್ರಾಲಯಮದಾಪಯತ್ ।**
**ತತಶ್ಚ ಗುರುವರ್ಯೇಣ ಸಹ ವೇಂಕಣ್ಣನಾಮಕಃ ।**
**ಮಂತ್ರಾಲಯಂ ಸಮಾಗತ್ಯ ಕಿಂ ಕಾರ್ಯಂ ವದ ಸದ್ಗುರೋ ॥೧೬೩॥**

ವೆಂಕಣ್ಣನು ರಾಜನಿಗೆ ಹೇಳಿ ಮಂತ್ರಾಲಯವನ್ನು ಕೊಡಿಸಿದನು. ಆಮೇಲೆ ಆ ವೆಂಕಣ್ಣನು ಶ್ರೀಗುರುಶ್ರೇಷ್ಠರಿಂದ ಕೂಡಿಕೊಂಡು ಮಂತ್ರಾಲಯಕ್ಕೆ ಬಂದು ಹೇ ಗುರುವರ್ಯರೇ ! ಏನು ಮಾಡುವುದು ಅಪ್ಪಣೆಮಾಡಿ (ಎಂದನು).

ಇತ್ಯೂಚಿವಾಂಸಂ ವೇಂಕಣ್ಣಂ ರಹಸ್ಯಂ ಪ್ರಾಬ್ರವೀನ್ಮನು ।
ಕೃತೇ ಚ ಹೇಮಕಶಿಪುರತ್ರ ರಾಜ್ಯಂ ಮುದಾಽಕರೋತ್ ।
ಪ್ರಹ್ಲಾದಸ್ತಸ್ಯ ತನಯೋಽಯಜ್ಞಮಸ್ಮಿನ್ ಚಕಾರ ಹಿ ॥೧೬೪॥

ಈ ರೀತಿ ಹೇಳಿದ ವೆಂಕಣ್ಣನಿಗೆ ರಹಸ್ಯವನ್ನು ಹೇಳಿದರು. ಕೃತಯುಗದಲ್ಲಿ ಹಿರಣ್ಯಕಶಿಪುವು ಈ ಮಂತ್ರಾಲಯದಲ್ಲಿ ಸಂತಸದಿಂದ ರಾಜ್ಯವಾಳಿದನು. ಆತನ ಮಗ ಪ್ರಹ್ಲಾದನು ಈ ಮಂತ್ರಾಲಯದಲ್ಲಿ ಯಾಗವನ್ನು ಮಾಡಿದನು. ನಿಶ್ಚಯವು.

ಇಯಂ ಭವಾನೀ ಕನಕಕಶಿಪೋಃಕುಲದೇವತಾ ।
ಸ್ಥಲಸ್ಯ ಸ್ವಾಮಿನೀ ಚಾಽಹಂ ಪ್ರಾರ್ಥಯಾಮಿ ಸ್ಥಲಂ ತ್ವಿದಮ್ ॥೧೬೫॥

ಈ ದುರ್ಗೆಯು ಹಿರಣ್ಯಕಶಿಪುವಿನ ಕುಲದೇವತೆಯು, ಮತ್ತು ಈ ಸ್ಥಳದ ಒಡೆಯಳು. (ಕಾರಣ) ಈ ಅಧಿವೇಶನವನ್ನು ಪ್ರಾರ್ಥಿಸುವೆ.

ಪ್ರಾರ್ಥನಾನಂತರಂ ಕಾಲೀ ಪ್ರತ್ಯಕ್ಷಂ ತಮುವಾಚ ಹಿ ।
ಸ್ಥಲದಾನೇ ತುಭ್ಯಮಹಂ ಚಿಂತಯಾಮಿ ಯತೇ ನ ಹಿ ॥೧೬೬॥

ಶ್ರೀಗುರುಗಳ ಪ್ರಾರ್ಥನಾನಂತರ ಕಾಲೀದೇವಿಯು ಪ್ರತ್ಯಕ್ಷಳಾಗಿ ಶ್ರೀಗುರುಗಳನ್ನು ಕುರಿತು ಮಾತನಾಡಿದಳು. ಹೇ ಯತಿಯೇ ! ನಿನಗೆ ಸ್ಥಳಕೊಡುವುದರಲ್ಲಿ ನಾನು ಚಿಂತಿಸುವುದಿಲ್ಲ. ಆದರೆ—

ತವ ವಾಸಾನಂತರಂ ತು ನಾಮಾಪಿ ಸ್ಮರ್ಯತೇ ನ ಮೇ ।
ತಸ್ಮಾನ್ಮಮ ಪ್ರಸಿದ್ಧ್ಯರ್ಥಂ ದ್ವಾರಂ ಮಮ ಗೃಹಸ್ಯ ತು ॥೧೬೭॥

ಅಜ ಶೀರ್ಷೈರ್ಲಾಂಛಿತಂ ತು ಸ್ಥಾಪ್ಯತಾಂ ಮಂದಿರೇ ತವ ।
ವಿಲೋಕ್ಯ ಜನಸಂಘಾಸ್ತಂ ನಾಮಧೇಯಂ ಸ್ಮರಂತಿ ತೇ ॥೧೬೮॥

ಮೂರ್ತಿಗಳನ್ನು (ಗಂಡಿಕಾನದಿಯಲ್ಲಿರುವ ಏಳುನೂರು ಲಕ್ಷ್ಮೀನಾರಾಯಣ ಸಾಲಿಗ್ರಾಮಗಳನ್ನು) ಬ್ರಾಹ್ಮಣರುಗಳಿಂದ ಬೇಗನೆ ತರಿಸು.

ಮಂತ್ರಾಲಯೇ ಬ್ರಾಹ್ಮಣೇಭ್ಯಃಗೃಹಷಷ್ಟಿಂ ಚ ಕಾರಯ ।
ವೇಂಕಣ್ಣಂ ಗುರುರಿತ್ಯುಕ್ತ್ವಾ ತತಶ್ಛಾತ್ರಾನ್ ಸಮಾಹ್ವಯತ್ ||೧೭೪||

ಮಂತ್ರಾಲಯದಲ್ಲಿ ಬ್ರಾಹ್ಮಣರಿಗೋಸ್ಕರ ಅರವತ್ತು ಮನೆಗಳನ್ನು ಮಾಡಿಸು (ಕಟ್ಟಿಸು) ಎಂದು ಶ್ರೀಗುರುಗಳು ವೆಂಕಣ್ಣನಿಗೆ ಹೇಳಿ ಆಮೇಲೆ ಶಿಷ್ಯರನ್ನು ಕರೆದರು.

ಇಲ್ಲಿಂದ ಹತ್ತು ಶ್ಲೋಕಗಳು ಶ್ರೀರಾಘವೇಂದ್ರಗುರು
ಸಾರ್ವಭೌಮರಿಂದ ರಚಿತವಾದ ಗ್ರಂಥಗಳ ವಿವರಣೆ :—

ಗೀತಾಯಾಶ್ಚ ಸುವಿವೃತಿಸ್ತತೋಽಸೌ ಭಾವದೀಪಿಕಾ ।
ಗೀತಾರ್ಥಮಂಜರೀನಾಮ್ನೀ ತತಃಸನ್ನ್ಯಾಯದೀಪಿಕಾ ||೧೭೫||

ಭಾವದೀಪೋ ನಾಮ ತತ್ವಪ್ರಕಾಶಾರ್ಥಪ್ರಕಾಶಕಃ ।
ದಶಪ್ರಕರಣಾನಾಂ ಸಟ್ಟಿಪ್ಪಣೀ ಶ್ರೀಹರೇಃಪ್ರಿಯಾ ||೧೭೫||

ದಶಕಸ್ಯೋಪನಿಷದಾಂ ಖಂಡಾರ್ಥೋ ಗುರುಸತ್ತಮಃ ।
ಋಗರ್ಥಮಂಜರೀ ಚೈವ ನ್ಯಾಯಮುಕ್ತಾವಲೀ ತಥಾ ||೧೭೬||

ಸೂತ್ರಾಕ್ಷರಾರ್ಥಸಂಬೋಧಿನ್ಯುತ್ತಮಾ ತಂತ್ರದೀಪಿಕಾ ।
ಸ ವ್ಯಾಖ್ಯಾತ್ವಣುಭಾಷ್ಯಸ್ಯ ಮೋಕ್ಷದಾ ತತ್ವಮಂಜರೀ ||೧೭೭||

ಈಶಾವಾಸ್ಯೋಪನಿಷದೋ ವಿವೃತಿರ್ಜ್ಞಾನದಾಯಿನೀ ।
ಅಥರ್ವಣೋಪನಿಷದೋ ವಿವೃತಿರ್ವಿಷ್ಣುಧೀಪ್ರದಾ ||೧೭೮||

ಟಿಪ್ಪಣೀ ಸಚ್ಚಂದ್ರಿಕಾಯಾಸ್ತಮೋಘ್ನೀ ತು ಪ್ರಕಾಶಿಕಾ ।
ಪ್ರಮಾಣಪದ್ಧತಿಗ್ರಂಥಟಿಪ್ಪಣೀ ಭಾವಬೋಧಿನೀ ||೧೭೯||

ವಾದಾವಳ್ಯಾಷ್ಟಿಪ್ಪಣೀ ತು ವಿದುಷಾಂ ಮೋದದಾಯಿನೀ ।
ಪ್ರಾತಸ್ಸಂಕಲ್ಪಗದ್ಯಂ ಚ ತರ್ಕತಾಂಡವಟಿಪ್ಪಣೀ ||೧೮೦||

ವ್ಯಾಖ್ಯಾ ಪುರುಷಸೂಕ್ತಸ್ಯ ವಿದುಷಾಂ ಶೀರ್ಷಚಾಲಿನೀ ।
ಅಂಭ್ರಣೀಸೂಕ್ತವಿವೃತಿರ್ಲಕ್ಷ್ಮೀತುಷ್ಟಿವಿವರ್ಧನೀ ॥೧೬೦॥

ಹಿರಣ್ಯಗರ್ಭಸೂಕ್ತಸ್ಯ ವ್ಯಾಖ್ಯಾನಂ ಬ್ರಹ್ಮತುಷ್ಟಿದಂ ।
ವೇದತ್ರಯಾಣಾಂ ವಿವೃತಿರ್ಮಾನಿನಾಂ ಮಾನಖಂಡಿಕಾ ॥೧೬೨॥

ಭಾಟ್ಟಸಂಗ್ರಹಮೀಮಾಂಸಾ ತಥಾ ಶ್ರೀಭಾವಸಂಗ್ರಹಃ ।
ರಾಮಕೃಷ್ಣಚರಿತ್ರಾಣಾಂ ಮಂಜರೀ ಸರ್ವಸಮ್ಮತಾ ॥೧೬೩॥

ಆಮೇಲೆ ಶ್ರೀರಾಯರು (1) ಗೀತಾವಿವೃತೀ, (2) ಭಾವದೀಪಿಕಾ, ನಂತರ ಸಮೀಚೀನವಾದ (3) ನ್ಯಾಯದೀಪಿಕಾ, ತತ್ವಪ್ರಕಾಶದ ಅರ್ಥವನ್ನು ಪ್ರಕಾಶಮಾಡುವ (ತಿಳಿಸುವ) (4) ಭಾವದೀಪ ಎಂದು ಹೆಸರುಳ್ಳದ್ದು, ಶ್ರೀಶನಿಗೆ ಪ್ರಿಯವಾದ (5) ದಶಪ್ರಕರಣಟಿಪ್ಪಣಿಯು, ಶ್ರೀಗುರುಶ್ರೇಷ್ಠರು (6) ದಶೋಪನಿಷತ್ಖಂಡಾರ್ಥವು ಮತ್ತು (7) ಋಗರ್ಥಮಂಜರೀ ಹಾಗೂ (8) ನ್ಯಾಯಮುಕ್ತಾವಳಿಯು, ಬಹ್ಮಸೂತ್ರಾಕ್ಷರಾರ್ಥವನ್ನು ಚೆನ್ನಾಗಿ ತಿಳಿಸುವ ಉತ್ತಮವಾದ (9) ತಂತ್ರದೀಪಿಕಾ, ಅಣುಭಾಷ್ಯಕ್ಕೆ ಒಳ್ಳೆವ್ಯಾಖ್ಯಾನ ರೂಪವಾದ ಮೋಕ್ಷವನ್ನು ಕೊಡುವ (10) ತತ್ವಮಂಜರೀ, ಜ್ಞಾನವನ್ನು ಕೊಡುವ (11) ಈಶಾವಾಸ್ಯೋಪನಿಷದ್ವಿವೃತಿಯು, ಶ್ರೀಪರಮಾತ್ಮನಲ್ಲಿ ಬುದ್ಧಿಯನ್ನು ಕೊಡುವ (12) ಅಥರ್ವಣೋಪನಿಷದ್ವಿವೃತಿಯು, ಅಜ್ಞಾನವನ್ನು ಕಳೆಯುವ ಶ್ರೇಷ್ಠಚಂದ್ರಿಕಾಕ್ಕೆ (13) ಪ್ರಕಾಶಿಕಾ (ಚಂದ್ರಿಕಾಪ್ರಕಾಶಿಕಾ) ಎಂಬ ಟಿಪ್ಪಣಿಯು, ಪ್ರಮಾಣಪದ್ಧತಿ ಎಂಬ ಗ್ರಂಥಕ್ಕೆ ಟಿಪ್ಪಣಿಯಾದ (14) ಭಾವಬೋಧಿನಿಯು, ಪಂಡಿತರಿಗೆ ಸಂತೋಷಪಡಿಸುವ (15) ವಾದಾವಳಿ ಟಿಪ್ಪಣಿಯು ಮತ್ತು (17) ಪ್ರಾತಸ್ಸಂಕಲ್ಪಗದ್ಯವು, ಹಾಗೂ (16) ತರ್ಕತಾಂಡವ ಟಿಪ್ಪಣಿಯು, ಪಂಡಿತರ ತಲೆಯನ್ನು ಅಲುಗಾಡಿಸುವ (ಪಂಡಿತರು ತಲೆದೂಗುವ (18) ಪುರುಷಸೂಕ್ತ ವ್ಯಾಖ್ಯಾನವು, ಶ್ರೀಲಕ್ಷ್ಮೀದೇವಿಯ ಸಂತೋಷವನ್ನು ಬೆಳೆಸುವ (19) ಅಂಭ್ರಣೀಸೂಕ್ತವಿವೃತಿಯು (ವಿವರಣೆಯು), ಚತುರ್ಮುಖ ಬ್ರಹ್ಮನಿಗೆ ಸಂತೋಷಕೊಡುವ (10) ಹಿರಣ್ಯಗರ್ಭಸೂಕ್ತದ ವ್ಯಾಖ್ಯಾನವು, ಅಭಿಮಾನಿಗಳ ಮಾನವನ್ನು ಕಳೆಯುವ (21) ಮೂರುವೇದಗಳ ವಿವೃತಿಯು,

(22) ಭಾಟ್ಟಸಂಗ್ರಹಮೀಮಾಂಸಾ ಹಾಗೂ (23) ಶ್ರೀಭಾವಸಂಗ್ರಹವು, ಎಲ್ಲರಿಗೆ ಸಮ್ಮತವಾದ (24) ರಾಮಚಾರಿತ್ರಮಂಜರೀ, (25) ಕೃಷ್ಣಚಾರಿತ್ರ ಮಂಜರೀ.

**ಚತ್ವಾರಿಂಶತ್ ಷಡಧಿಕಗ್ರಂಥಾಃಸ್ವೇನ ಕೃತಾ ಇತಿ ।**
**ತಾನ್ ಪಾಠಯಿತ್ವಾ ಸಚ್ಛಿಷ್ಯಾನ್ ಸ್ವಾವಸಾನಂ ಬುಬೋಧ ಸಃ ॥೧೮೪॥**

(ಈ ರೀತಿಯಾಗಿ) ನಲವತ್ತರಿಂದ ಆರು ಹೆಚ್ಚಾದ (ನಲವತ್ತಾರು) ಗ್ರಂಥಗಳು ತಮ್ಮಿಂದ ಮಾಡಲ್ಪಟ್ಟವುಗಳು ಎಂದು, ಅವುಗಳನ್ನು ಯೋಗ್ಯ ಶಿಷ್ಯರುಗಳಿಗೆ ಪಾಠವನ್ನು ಹೇಳಿ ಶ್ರೀರಾಯರು ತಮ್ಮ ಕೊನೆಯ ಕಾಲವನ್ನು (ಅವಸಾನಕಾಲವನ್ನು) ತಿಳಿದರು.

**ವೇಂಕಣ್ಣಕಾರಿತಂ ಸರ್ವಂ ಸ್ವೇನೋಕ್ತಂ ಗುರುವರ್ಯಕಃ ।**
**ವೃಂದಾವನಗೃಹಂ ದೃಷ್ಟ್ವಾ ವೇಂಕಣ್ಣಂ ಸ ಜಗಾದ ಹ ॥೧೮೫॥**

ಶ್ರೀರಾಘವೇಂದ್ರಗುರುವರ್ಯರು ತಮ್ಮಿಂದ ಹೇಳಲ್ಪಟ್ಟ ಎಲ್ಲವೂ ವೆಂಕಣ್ಣನಿಂದ ಮಾಡಲ್ಪಟ್ಟಿದ್ದನ್ನು ನೋಡಿ ಶ್ರೀಗುರುಗಳು ವೃಂದಾವನದ ಮನೆಯನ್ನು (ನೋಡಿ) ವೆಂಕಣ್ಣನನ್ನು ಕುರಿತು ಮಾತನಾಡಿದರು.

**ಅದ್ಯ ವೃಂದಾವನೇ ವಾಸಂ ಕರಿಷ್ಯಾಮಿ ನ ಸಂಶಯಃ ।**
**ಇತ್ಯುಕ್ತ್ವಾ ಬ್ರಾಹ್ಮಣಶ್ರೇಷ್ಠಂ ಸಾಂಗವೇದಸುಪಾಠಕಂ ।**
**ವೃಂದಾವನಸ್ಯ ಪೂಜಾದಿಕರ್ತವ್ಯಮಿತಿ ಚೋಕ್ತವಾನ್ ॥೧೮೬॥**

ಇಂದು ವೃಂದಾವನದಲ್ಲಿ ವಾಸವನ್ನು ಮಾಡುವೆವು; ಸಂಶಯವಿಲ್ಲ. ಎಂದು ಹೇಳಿ, ಅಂಗಸಹಿತವೇದಪಾಠಕನಾದ ಉತ್ತಮಬ್ರಾಹ್ಮಣನು ಬೃಂದಾವನದ ಪೂಜಾದಿಗಳಿಗೆ ಇಡಲ್ಪಡಲಿ ಎಂದೂ ಹೇಳಿದರು.

**ಏವಂ ವಾಕ್ಯಂ ಗುರೋಃಶ್ರುತ್ವಾ "ಗುರೋ! ತೇ ದರ್ಶನಂ ವಿನಾ ।**
**ಕಥಂ ಸ್ಥಾಸ್ಯಾಮ್ಯದ್ಯ? ಚೇತಿ ವೇಂಕಣ್ಣೋಕ್ತೋ ಗುರುರ್ಹಿತಮ್ ।**
**ಅಹಂ ವೃಂದಾವನಸ್ಥೋಽಪಿ ಪೂರಯಾಮಿ ತವೇಪ್ಸಿತಂ ॥೧೮೭॥**

ಶ್ರೀರಾಯರ ಇಂತಹ ವಾಕ್ಯವನ್ನು ಕೇಳಿ ಗುರುಗಳೇ ! ನಿಮ್ಮ ದರ್ಶನ ವಿಲ್ಲದೆ ಇಂದು ಹೇಗೆ ಇರುವೆ (ನಿಮ್ಮ ದರ್ಶನವಿಲ್ಲದೆ ಇರಲಾರೆ ಎಂದು ತಾತ್ಪರ್ಯ) ಎಂದು ವೆಂಕಣ್ಣನಿಂದ ಹೇಳಲ್ಪಟ್ಟ ಶ್ರೀಗುರುಗಳು, ನಾವು ಬೃಂದಾವನದಲ್ಲಿದ್ದರೂ ನಿನ್ನ ಬಯಕೆಯನ್ನು ಪೂರೈಸುವೆವು.

**ಇತ್ಯುಕ್ತ್ವಾ ರಾಘವೇಂದ್ರಾರ್ಯೋ ವೇಂಕಣ್ಣಾಚಾರ್ಯ ಧೀಮತೇ ।**
**ಯತ್ಯಾಶ್ರಮಂ ಪ್ರದತ್ವಾ ತು ಕೃತ್ವಾ ಯೋಗೀಂದ್ರನಾಮಕಂ ।**
**ದದೌ ರಾಮತ್ರಯಂ ತಸ್ಮೈ ಸರ್ವಂ ಸುಪ್ರತಿಮಾದಿಕಂ ॥೧೮೮॥**

ಈ ರೀತಿಯಾಗಿ ಹೇಳಿ **ಪೂಜ್ಯ ಶ್ರೀರಾಘವೇಂದ್ರತೀರ್ಥರು** ಪಂಡಿತ ವೆಂಕಣ್ಣಾಚಾರ್ಯರಿಗೆ ಯತ್ಯಾಶ್ರಮವನ್ನು ವಿಧಿಪೂರ್ವಕವಾಗಿ ಕೊಟ್ಟು **ಯೋಗೀಂದ್ರ** ಎಂಬ ಹೆಸರುಳ್ಳವರನ್ನು ಮಾಡಿ (ಯೋಗೀಂದ್ರ ತೀರ್ಥರು ಎಂದು ಹೆಸರಿಟ್ಟು) ಆ ಶ್ರೀಯೋಗೀಂದ್ರತೀರ್ಥರಿಗೆ ಮೂರು ಶ್ರೀರಾಮದೇವರ ಪ್ರತಿಮೆಯನ್ನು (ಶ್ರೀಚತುರ್ಮುಖ ಬ್ರಹ್ಮನಿಂದ ಪೂಜಿತ **ಶ್ರೀಮೂಲರಾಮ ದೇವರು,** ಶ್ರೀಮದಾನಂದತೀರ್ಥರಿಂದ ಪೂಜಿತ **ಶ್ರೀದಿಗ್ವಿಜಯರಾಮ ದೇವರು,** ದಶಾವತಾರಪೀಠವುಳ್ಳದ್ದು, ತಲೆ ಮತ್ತು ಪಾದದಲ್ಲಿ ಸುದರ್ಶನ ಉಳ್ಳಂತಹುದು, ಶ್ರೀಜಯತೀರ್ಥರಿಂದ ಪೂಜಿತ **ಶ್ರೀಜಯರಾಮದೇವರು). (ಮತ್ತು) ಶ್ರೀಲಕ್ಷ್ಮೀನಾರಾಯಣದೇವರು** ಶ್ರೀ, ಭೂ, ದುರ್ಗೆಯರಿಂದ ಕೂಡಿದ **ಶ್ರೀವೈಕುಂಠವಾಸದೇವರು.** ಅಷ್ಟಮಹಿಷಿಯರ ಪೈಕಿ ಓರ್ವ ಳಾದ ನೀಲಾದೇವಿಯಿಂದ ಪೂಜಿತವಾದದ್ದು. ತಾವೇ ಮಾಡಿ ಶ್ರೀಉಡುಪಿ ಕೃಷ್ಣನಲ್ಲಿ ಪೂಜಿಸಿದ ಬಂಗಾರದ, ಕಡಗೋಲು, ಹಗ್ಗ ಹಿಡಿದ ಶ್ರೀಕೃಷ್ಣ **ಪ್ರತಿಮೆ** ಎಲ್ಲ ಉತ್ತಮವಾದ ಪ್ರತಿಮೆಗಳನ್ನು ಕೊಟ್ಟರು.

**ಈಶಾನನೇತ್ರಯುತರಂಧ್ರಯುತೇಷು ದಿಗ್ಭಿಃ ।**
**ಶ್ರೀಶಾಲಿವಾಹನಶಕೇನ ಮಿತೇ ತು ಕಾಲೇ ॥**
**ಅಬ್ದೇ ವಿರೋಧಿಕೃತಿ ಸುಪ್ತುದಿನೇ ಸುಮಾಸೇ ।**
**ಶ್ರೀಶ್ರಾವಣೇ ತ್ವಸಿತಪಕ್ಷಕವಿದ್ವಿತೀಯೇ ॥೧೮೯॥**

ಶ್ರೀಶಾಲಿವಾಹನಶಕ ೧೫೯೩ ವಿರೋಧಿಕೃತ್ ಸಂವತ್ಸರ ಒಳ್ಳೆ ಶ್ರಾವಣ ಮಾಸ ಕೃಷ್ಣ ದ್ವಿತೀಯಾ ಶುಕ್ರವಾರ ಶುಭದಿನದಲ್ಲಿ—

ಅ. ವಿ. :— ಈಶ್ವರನ ಕಣ್ಣು 3; ರಂಧ್ರ 9; ಇಷು 5, ದಿಕ್ 1 ಅಂಕಾನಾಂ ವಾಮತೋ ಗತಿಃ ಎಂಬ ನಿಯಮದಿಂದ 1593 ಎಂದು ಆಯಿತು.

**ಕಾರಿತೇ ಭಕ್ತವರ್ಯೇಣ ಶ್ರೇಷ್ಠವೃಂದಾವನೇ ಮುದಾ ।**
**ಉವಾಸ ಶ್ರೀರಾಘವೇಂದ್ರೋ ರಾಮಧ್ಯಾನಪರಾಯಣಃ ॥**
**ಕಮಂಡಲುಂ ತ್ವಕ್ಷಮಾಲಾಂ ದಂಡಂ ಧೃತ್ವಾ ಗುರೂತ್ತಮಃ ।**
**ಸಾಲಿಗ್ರಾಮಶಿಲಾಭಿಸ್ತು ವೃಂದಾವನಮಪೂರಯತ್ ॥೧೯೦॥**

ಭಕ್ತಶ್ರೇಷ್ಠನಾದ ವೆಂಕಣ್ಣನಿಂದ ಮಾಡಿಸಲ್ಪಟ್ಟ ವೃಂದಾವನದಲ್ಲಿ ಶ್ರೀರಾಮಧ್ಯಾನದಲ್ಲಿ ಆಸಕ್ತರಾದ ಗುರೂತ್ತಮರಾದ ಶ್ರೀರಾಘವೇಂದ್ರತೀರ್ಥರು ಕಮಂಡಲುವನ್ನು ಅಕ್ಷರಮಾಲಾವನ್ನು ದಂಡವನ್ನು ಧಾರಣಮಾಡಿ (ತೆಗೆದು ಕೊಂಡು) ವೃಂದಾವನದಲ್ಲಿ ವಾಸಿಸಿದರು. ವೃಂದಾವನವನ್ನು ಸಾಲಿಗ್ರಾಮ ಗಳಿಂದ ತುಂಬಿದರು. (ಶ್ರೀಗುರುಗಳ ಅಪ್ಪಣೆಯಂತೆ ಬ್ರಾಹ್ಮಣರು ಅವರ ತಲೆಯ ಮೇಲಿನಿಂದ ಸಾಲಿಗ್ರಾಮಗಳನ್ನು ತುಂಬಿದರು).

**ತಸ್ಮಿನ್ ದಿನೇ ಸ ಯೋಗೀಂದ್ರೋ ವೇಂಕಣ್ಣೇನ ಪುರಸ್ಕೃತಃ ।**
**ವೃಂದಾವನೇ ರಾಮಪೂಜಾಂ ಚಕಾರ ಚ ಮಹೋತ್ಸವಂ ॥೧೯೧॥**

ಅಂದಿನ ದಿನದಲ್ಲಿ ವೆಂಕಣ್ಣನಿಂದ ಪುರಸ್ಕೃತರಾದ ಆ ಶ್ರೀಯೋಗೀಂದ್ರ ತೀರ್ಥರು ವೃಂದಾವನದಲ್ಲಿ ಶ್ರೀರಾಮದೇವರ ಪೂಜೆಯನ್ನು ಮತ್ತು ಉತ್ಸವ ವನ್ನು ಮಾಡಿದರು.

**ಇತಿ ಶ್ರೀರಾಘವೇಂದ್ರಾಣುವಿಜಯೇ ಚತುರ್ಥಸರ್ಗಃ ॥**

ಹೀಗೆ ಶ್ರೀರಾಘವೇಂದ್ರಾಣುವಿಜಯದಲ್ಲಿ ನಾಲ್ಕನೇ ಸರ್ಗವು ಮುಗಿಯಿತು.



## ಪಂಚಮಸರ್ಗಃ—ಐದನೆಯ ಸರ್ಗವು

ತತಃ ಸ ಯೋಗೀಂದ್ರಯತಿಃ ಸ್ಮಾಹ ವೇಂಕಣ್ಣನಾಮಕಂ ।
ಸಂಯೋಜಯ ಬ್ರಾಹ್ಮಣಾಂಸ್ತ್ವಂ ಶ್ರೇಷ್ಠಾನುಚಿತಕರ್ಮಣಿ ॥೧॥

ಅನಂತರದಲ್ಲಿ ಆ ಶ್ರೀಯೋಗೀಂದ್ರಯತಿಗಳು ವೆಂಕಣ್ಣನನ್ನು ಕುರಿತು ಉಚಿತಕೆಲಸಗಳಲ್ಲಿ ಉತ್ತಮರಾದ ಬ್ರಾಹ್ಮಣರನ್ನು ನೀನು ಸರಿಯಾಗಿ ನಿಯೋಜಿಸು (ಎಂದು) ಹೇಳಿದರು.

ವೇಂಕಣ್ಣಸ್ತಿಮ್ಮಣಾಚಾರ್ಯಂ ಪ್ರಾವದತ್ತಂ ಪುರೋಹಿತಂ ।
ಪ್ರಾಜ್ಞ ! ತ್ವಂ ತಿಮ್ಮಣಾಚಾರ್ಯ ! ಪೂಜಾಂ ಕುರು
ಮಹಾಗುರೋಃ ॥೨॥

ವೆಂಕಣ್ಣನು ಪುರೋಹಿತರಾದ ಆ ತಿಮ್ಮಣಾಚಾರ್ಯರನ್ನು ಕುರಿತು ಮಾತನಾಡಿದನು. ಜ್ಞಾನಿಗಳಾದ ತಿಮ್ಮಣಾಚಾರ್ಯರೇ ! ನೀವು ಗುರುಶ್ರೇಷ್ಠರ ಪೂಜೆಯನ್ನು ಮಾಡಿ (ಎಂದು).

ಏವಂ ಸ ಬ್ರಾಹ್ಮಣವರಾನ್ ಪ್ರಾರ್ಥಯಾಮಾಸ ವೇಂಕಟಃ ।
ಏಕೈಕಸ್ಯ ದ್ವಿಜಸ್ಯೈಕಂ ಕೃತ್ಯಂ ಯೋಗ್ಯೋಚಿತಕರ್ಮಣಿ ॥೩॥

ಈ ರೀತಿಯಾಗಿ ಆ ವೆಂಕಣ್ಣನು ಯೋಗ್ಯವಾದ ಕಾರ್ಯಗಳಲ್ಲಿ ಒಬ್ಬೊಬ್ಬ ಬ್ರಾಹ್ಮಣರಿಗೆ ಒಂದೊಂದು ಕೆಲಸವನ್ನು (ಮಾಡಲು) ಬ್ರಾಹ್ಮಣ ಶ್ರೇಷ್ಠರನ್ನು ಪ್ರಾರ್ಥಿಸಿದನು.

ತದಾ ಸರ್ವೇಽಪಿ ಬ್ರಾಹ್ಮಣಾಸ್ತೇ ತದುಕ್ತಂ ಚಕ್ರುರಂಜಸಾ ।
ತದಾರಭ್ಯ ಪುರಾಣಾದಿಕಾರ್ಯಂ ಪ್ರಾವರ್ತತಾಖಿಲಮ್ ॥೪॥

ಆಗ ಆ ಎಲ್ಲ ಬ್ರಾಹ್ಮಣರು ಶೀಘ್ರವಾಗಿ ವೆಂಕಣ್ಣನಿಂದ ಹೇಳಿದ ಕೆಲಸಗಳನ್ನು ಮಾಡಿದರು. ಅಂದಿನಿಂದ ಆರಂಭಿಸಿ ಎಲ್ಲ ಪುರಾಣಾದಿಕೆಲಸಗಳು (ಪುರಾಣವೇ ಮೊದಲಾದ ಎಲ್ಲ ಕೆಲಸಗಳು) ನಡೆದವು.

ತತ್ತದ್ಯೋಗ್ಯಂ ಸರ್ವಕಾರ್ಯಮೇವಂ ಚಕ್ರುರ್ನಿರಂತಂ ।
ಮಂತ್ರಾಲಯೇ ಸದಾರಾಸ್ತೇ ವಾಸಂ ಚಕ್ರುರ್ಜನಾಸ್ತದಾ ॥೫॥

ಈ ರೀತಿ ಅವರವರಿಗೆ ಯೋಗ್ಯವಾದ ಎಲ್ಲ ಕಾರ್ಯವನ್ನು ಪ್ರತಿದಿನದಲ್ಲಿ ಮಾಡುತ್ತಿದ್ದರು. ಆಗ ಆ ಜನರು ಮಂತ್ರಾಲಯದಲ್ಲಿ ಹೆಂಡಂದಿರಿಂದ ಯುಕ್ತರಾದವರಾಗಿ ಇರುವಿಕೆಯನ್ನು ಮಾಡಿದರು. (ಆ ಜನರು ಹೆಂಡಂದಿರಿಂದ ಕೂಡಿಕೊಂಡು ಮಂತ್ರಾಲಯದಲ್ಲಿ ವಾಸಮಾಡಿದರು).

ಗುರುಂ ವೃಂದಾವನಸ್ಥಂ ತು ಶ್ರುತ್ವಾ ಶಿಷ್ಯಾಪ್ಪಣಾರ್ಯಕಃ ।
ಭಿಕ್ಷಾಲಯಂ ತತ್ಕ್ಷಣೇ ಸ ತ್ಯಕ್ತ್ವಾ ಮಂತ್ರಾಲಯಂ ಯಯೌ ॥೬॥

ಪ್ರಸಿದ್ಧಶಿಷ್ಯರಾದ ಅಪ್ಪಣಾಚಾರ್ಯರಾದರೋ ಶ್ರೀರಾಯರನ್ನು ಬೃಂದಾವನದಲ್ಲಿರುವವರನ್ನು ಕೇಳಿ (ಬೃಂದಾವನಸ್ಥರಾದದ್ದನ್ನು ಕೇಳಿ) ಆ ಕ್ಷಣದಲ್ಲಿಯೇ ಭಿಕ್ಷಾಲಯನ್ನು ಬಿಟ್ಟು (ಬಿಚ್ಚಾಲಿ ಎಂಬ ತಮ್ಮ ಊರನ್ನು ಬಿಟ್ಟು) ಮಂತ್ರಾಲಯಕ್ಕೆ ಹೋದರು (ಹೊರಟರು).

ಭಿಕ್ಷಾಲಯಂ ಸಮಾರಭ್ಯ ಪರ್ಯಂತಂ ಗುರುಸನ್ನಿಧೇಃ ।
ಕೃತವಾನಪ್ಪಣಾಚಾರ್ಯೋ ಗುರುಸ್ತೋತ್ರಮನುತ್ತಮಮ್ ॥೭॥

ಅಪ್ಪಣಾಚಾರ್ಯರು ಭಿಕ್ಷಾಲಯವನ್ನು ಪ್ರಾರಂಭಿಸಿ ಶ್ರೀಗುರುಗಳ ಸನ್ನಿಧಿಯವರಿವಿಗೆ ಉತ್ತಮವಾದ ಗುರುಸ್ತೋತ್ರವನ್ನು ಮಾಡಿದರು. (ಬಿಚ್ಚಾಲಿಯನ್ನು ಬಿಟ್ಟಕೂಡಲೇ ಆರಂಭಿಸಿದ ಗುರುಸ್ತೋತ್ರವನ್ನು ಶ್ರೀಗುರುಗಳ ಬೃಂದಾವನಸನ್ನಿಧಿಗೆ ಬರುವವರೆವಿಗೂ ಮಾಡಿದರು).

"ಶ್ರೀಪೂರ್ಣಬೋಧೇತ್ಯಾರಭ್ಯ ವಿಭೂತಿರತುಲಾ"ವಧಿ ।
"ಸಾಕ್ಷೀ ಹಯಾಸ್ಯೋತ್ರ ಹೀ" ತಿ ಗುರುಣೈವ ಸಮೀರಿತಂ ॥೮॥

"ಶ್ರೀಪೂರ್ಣಬೋಧ" ಎಂದು ಆರಂಭಿಸಿ "ವಿಭೂತಿರತುಲಾ" ಎನ್ನುವವರೆವಿಗೂ (ಅಪ್ಪಣಾಚಾರ್ಯರು ಸ್ತೋತ್ರವನ್ನು ಮಾಡಿದರು) "ಸಾಕ್ಷೀ ಹಯಾ-ಸ್ಯೋಽತ್ರ ಹಿ" ಎಂದು (ಬೃಂದಾವನಸ್ಥ) ಗುರುಗಳಿಂದಲೇ ಹೇಳಲ್ಪಟ್ಟಿತು.

ತದಾ ತತ್ರಸ್ಥಸುಜನೈರ್ವಾಕ್ಯಮಾತ್ರಂ ಶ್ರುತಂ ಗುರೋಃ ।
ಅಪ್ಪಣಾಚಾರ್ಯವಿದುಷಾ ರೂಪಮುಸ್ಯವಲೋಕಿತಂ ॥೯॥

ಆಗ ಅಲ್ಲಿರುವ ಪುಣ್ಯವಂತರಿಂದ ಶ್ರೀಗುರುಗಳ ವಾಕ್ಯವು ಮಾತ್ರ ಕೇಳಲ್ಪಟ್ಟಿತು. ಕೋವಿದರಾದ ಅಪ್ಪಣಾಚಾರ್ಯರಿಂದ ಶ್ರೀಗುರುಗಳ ರೂಪವೂ ನೋಡಲ್ಪಟ್ಟಿತು.

**ವೃಂದಾವನಸ್ಥಗುರುಣಾ ಸರ್ವಾಭೀಷ್ಟಂ ಚ ದೀಯತೇ ।**
**ಇತಿ ವಾರ್ತಾಂ ಜನಾಃಶೃತ್ವಾ ಸೇವಾರ್ಥಮಾಗಮಂಸ್ತದಾ ॥೧೦॥**

ವೃಂದಾವನದಲ್ಲಿರುವ ಶ್ರೀಗುರುಗಳಿಂದ ಎಲ್ಲ ಕೋರಿಕೆಗಳು ಕೊಡಲ್ಪಡುತ್ತದೆ ಎಂಬ ಸುದ್ದಿ (ಸಮಾಚಾರ) ವನ್ನು ಜನರುಗಳು ಕೇಳಿ ಆಗ ಸೇವೆಗಾಗಿ ಬಂದರು.

**ಏಕಸ್ಮಿನ್ ದಿವಸೇ ಕಶ್ಚಿನ್ಮನ್ರೋನಾಮಾ ಸುವಿಶೃತಃ ।**
**ರಾಜಭೃತ್ಯಸ್ತಾಮ್ರಮುಖೀ ಪ್ರತಿಗ್ರಾಮಂ ವಿಚಾರಯನ್ ॥೧೧॥**

**ಮಂತ್ರಾಲಯಂ ಸಮಾಗತ್ಯ ವೃಂದಾವನಮವೈಕ್ಷತ ।**
**"ಕುತಃ ? ಶಿಲಾಯಾಃಗ್ರಾಮಾದಿದೇಯಮಿ" ತ್ಯಬ್ರವೀತ್ತದಾ ॥೧೨॥**

ಒಂದಾನೊಂದು ದಿನದಲ್ಲಿ ರಾಜಭೃತ್ಯನಾದ ಕೆಂಪುಮುಖವುಳ್ಳ "ಮನ್ರೋ" ಎಂದು ಪ್ರಸಿದ್ಧನಾದ ಒಬ್ಬನು ಪ್ರತಿಗ್ರಾಮವನ್ನು (ಜಹಗೀರಿಯ ಬಗ್ಗೆ) ವಿಚಾರಿಸುವವನಾಗಿ—

ಮಂತ್ರಾಲಯಕ್ಕೆ ಬಂದು ಶ್ರೀಬೃಂದಾವನವನ್ನು ನೋಡಿದನು. ಆಗ, ಕಲ್ಲಿಗೆ ಗ್ರಾಮವೇ ಮೊದಲಾದದ್ದನ್ನು ಏಕೆ ಕೊಡಬೇಕು ಎಂದು ಹೇಳಿದನು.

**"ಮನ್ರೋ"ನಾಮೀತ್ಯುಕ್ತವತಿ ವಸನ್ ವೃಂದಾವನೇ ಗುರುಃ ।**
**ದೃಷ್ಟಿಗಃಸನ್ ರಾಘವೇಂದ್ರೋ ತಂ ದೃಷ್ಟ್ವಾ ಚಷ್ಟ**
**ಆದರಾತ್ ವದತ್ಖಲು ॥೧೩॥**

ಮನ್ರೋನು ಈ ರೀತಿ ಹೇಳುತ್ತಿರಲು ವೃಂದಾವನದಲ್ಲಿರುವ ಗುರುಗಳಾದ ಶ್ರೀರಾಘವೇಂದ್ರತೀರ್ಥರು ಕಣ್ಣಿಗೆ ಬೀಳುವವರಾಗಿ (ಪ್ರತ್ಯಕ್ಷರಾಗಿ) ಮನ್ರೋವನ್ನು ಕುರಿತು ಆದರದಿಂದ ಮಾತನಾಡಿದರು.

**ಬ್ರಾಹ್ಮಣಾನಾಂ ರಕ್ಷಣಾಯ ದೇಯೋ ಗ್ರಾಮೋ ನಮಂತ್ಯತೇ ।**
**ಇತಿ ವಾಕ್ಯಂ ಗುರೋಃಶೃತ್ವಾ ಸ ತಂ ದೃಷ್ಟ್ವಾSವದತ್ತದಾ ॥೧೪॥**

ಬ್ರಾಹ್ಮಣರ ರಕ್ಷಣೆಯು ಗೋಸುಗ ಗ್ರಾಮವು ಕೊಡಲ್ಪಡಲಿ, ನನಗೋಸ್ಕರ ಅಲ್ಲ ಎಂಬ ವಾಕ್ಯವನ್ನು ಶ್ರೀರಾಯರಿಂದ ಕೇಳಿ ಆ ಮನ್ರೋನಾಮಕನು ಶ್ರೀಗುರುಗಳನ್ನು ನೋಡಿ ಆಗ ಮಾತನಾಡಿದನು.

**ರಾಘವೇಂದ್ರ ! ಗುರುಶ್ರೇಷ್ಠ ! ತ್ವಾದೃಶೋ ನಾಸ್ತಿ ಭೂತಲೇ ।**
**ನಮಸ್ತೇ ರಾಘವೇಂದ್ರಾಯ ನಮಃಸರ್ವಾರ್ಥದಾಯಿನೇ ॥೧೫॥**

ಶ್ರೇಷ್ಠಗುರುಗಳಾದ ಶ್ರೀರಾಘವೇಂದ್ರರೇ ! ಭೂಮಿಯಲ್ಲಿ ನಿಮ್ಮ ಸಮಾನರು (ಯಾರೂ) ಇಲ್ಲ. ನಿಮಗೆ ವಂದನೆಗಳು. ಎಲ್ಲ ಅಭೀಷ್ಟವನ್ನು ಪೂರೈಸುವ ಶ್ರೀರಾಘವೇಂದ್ರತೀರ್ಥರಿಗೆ ನಮಸ್ಕಾರವು.

**ನಮೋ ಭಕ್ತಸುಪಾಲಾಯ ಗುರುವರ್ಯಾಯ ತೇ ನಮಃ ।**
**ಇತಿ ನತ್ವಾ ತಾಮ್ರಮುಖೀ ಮನ್ರೋನಾಮಾಧಿಪಸ್ತದಾ ।**
**"ಅವಶ್ಯಂ ದೀಯತೇ ಗ್ರಾಮಃಸಂದೇಹೋ ನಾಸ್ತಿ ಸದ್ಗುರೋ" ! ॥೧೬॥**

ನಿಮಗೆ ನಮಸ್ಕಾರವು, ಭಕ್ತರನ್ನು ಚೆನ್ನಾಗಿ ಸಲಹುವ ಪೂಜ್ಯಗುರುಗಳಿಗೆ ನಮಸ್ಕಾರವು. (ಶ್ರೀಗುರುಗಳಲ್ಲಿ ವಿಶೇಷಭಕ್ತಿಯುಕ್ತನಾದ ಪ್ರಯುಕ್ತ ಈ ರೀತಿ ಮತ್ತೆ ಮತ್ತೆ ನಮಸ್ಕರಿಸುವನು). ಹೀಗೆ ವಂದಿಸಿ ಕೆಂಪುಮುಖವುಳ್ಳ ಮನ್ರೋ ಎಂಬ ಅಧಿಕಾರಿಯು, ಆಗ ಹೇ ! ಸದ್ಗುರುಗಳೇ ! ಗ್ರಾಮವು ಅವಶ್ಯವಾಗಿ ಕೊಡಲ್ಪಡುತ್ತದೆ ಸಂದೇಹವಿಲ್ಲ.

**ಇತಿ ಪ್ರೋಕ್ತ್ವಾ ತಾಮ್ರಮುಖೀ ದತ್ವಾ ಗ್ರಾಮಂ ಚ ನಿರ್ಯಯೌ ।**
**ತದ್ಭಾಷಣಂ ದರ್ಶನಂ ಚ ಸರ್ವಂ ವೃತ್ತಂ ಲಿಲೇಖ ಸಃ ॥೧೭॥**

ಹೀಗೆ ಹೇಳಿ ಕೆಂಪುಮುಖವುಳ್ಳವನು (ಮನ್ರೋ) ಗ್ರಾಮವನ್ನು ಕೊಟ್ಟು ಪ್ರಯಾಣ ಮಾಡಿದನು. ಶ್ರೀಗುರುಗಳ ಭಾಷಣ ದರ್ಶನ ಮೊದಲಾದ ಎಲ್ಲವನ್ನು ಆ ಮನ್ರೋ ಬರೆದನು.

**ಲಿಖಿತಂ ತೇನ ಯದ್ವೃತ್ತಂ ಮುದ್ರಾಸಾಭಿದಪತ್ತನೇ ।**
**ಅದ್ಯಾಪಿ ವರ್ತತೇ ತತ್ತು ನ್ಯಾಯಾಸ್ಥಾನೇ ನೃಪಸ್ಯ ಹಿ ॥೧೮॥**

ಮನ್ರೋಲನಿಂದ ಯಾವ ಸಮಾಚಾರವು ಬರೆಯಲ್ಪಟ್ಟಿತೋ ಅದಾ

ದರೋ ಮದ್ರಾಸ್ ಎಂಬ ಹೆಸರುಳ್ಳ ಪಟ್ಟಣದಲ್ಲಿ (ಮದ್ರಾಸಿನಲ್ಲಿ) ರಾಜನ ನ್ಯಾಯಸ್ಥಾನದಲ್ಲಿ (ಹೈಕೋರ್ಟಿನಲ್ಲಿ) ಈಗಲೂ ಇರುತ್ತದೆ.

**ಏವಂ ಸತಿ ಗತೇ ಕಾಲೇ ಬೆನಕಪ್ಪೇತಿ ಗ್ರಾಮಣೀಃ ।**
**ಲಚ್ಮರೀನಾಮಕೇ ಗ್ರಾಮೇ ಸ್ಥಿತಶ್ಚಾಗತವಾನ್ ಗುರುಮ್ ॥೧೯॥**

ಹೀಗೆ ಕಾಲವು ಕಳೆಯುತ್ತಿರಲು ಲಚ್ಮರಿ ಎಂಬ ಊರಿನಲ್ಲಿರುವ ಶಾನುಭೋಗ ಬೆನಕಪ್ಪ ಎನ್ನುವರು ಗುರುಗಳನ್ನು ಕುರಿತು ಬಂದರು (ಮಂತ್ರಾಲಯಕ್ಕೆ ಬಂದರು).

**ಗುರುವಾರೇ ರಾಘವೇಂದ್ರಂ ಪೂರ್ವಪುಣ್ಯೇನ ದೃಷ್ಟವಾನ್ ।**
**ಏತಚ್ಛೃತ್ವಾ ಜನಾಸ್ತಸ್ಮೈ ಸ್ವಾಭೀಷ್ಟಂ ಜಗದುರ್ಮುದಾ ॥೨೦॥**

ಪೂರ್ವಜನ್ಮದ ಪುಣ್ಯದಿಂದ ಗುರುವಾರದಲ್ಲಿ ಶ್ರೀರಾಘವೇಂದ್ರಗುರುಗಳನ್ನು ನೋಡಿದರು. (ಅಂದಿನಿಂದ ಪ್ರತಿಗುರುವಾರವೂ ಶ್ರೀರಾಯರು ಪ್ರತ್ಯಕ್ಷರಾಗಿ ದರ್ಶನವನ್ನು ಕೊಡುತ್ತಿದ್ದರು) ಜನರು ಇದನ್ನು ಕೇಳಿ ಹರ್ಷದಿಂದ ಆ ಬೆನಕಪ್ಪನವರಿಗೆ ತಮ್ಮ ಇಚ್ಛೆಯನ್ನು ಹೇಳಿದರು (ಹೇಳುತ್ತಿದ್ದರು).

**ಜನಾಭೀಷ್ಟಂ ಚ ವಿಜ್ಞಾಪ್ಯ ತಾನ್ ಜಗಾದ ಗುರೂತ್ತರಂ ।**
**ವೇಂಕಣ್ಣಾರ್ಯೇಣ ಪ್ರೋಕ್ತಃ ಸ ಪ್ರಾರ್ಥಯಾಮಾಸ ಸದ್ಗುರುಮ್ ॥**

ಜನರ ಅಭೀಷ್ಟೆಯನ್ನಾದರೂ ವಿಜ್ಞಾಪಿಸಿ, ಅವರುಗಳನ್ನು ಕುರಿತು ಶ್ರೀರಾಯರು ಹೇಳಿದ ಉತ್ತರವನ್ನು ಹೇಳುತ್ತಿದ್ದರು.

(ಒಂದಾನೊಂದು ದಿನ) ಶ್ರೀಬೆನಕಪ್ಪನವರು ಪೂಜ್ಯರಾದ ವೆಂಕಣ್ಣಾಚಾರ್ಯರಿಂದ ಶ್ರೀಗುರುಶ್ರೇಷ್ಠರನ್ನು (ನಮಗೆ ದರ್ಶನವನ್ನೀಯಲು) ಪ್ರಾರ್ಥಿಸು (ಎಂದು) ಹೇಳಲ್ಪಟ್ಟರು.

**ಅ. ವಿ. :—** ಅಂದಿನಿಂದ ಸೇವೆಗೆ ಬಂದ ಜನರು ತಮ್ಮ ಕೆಲಸವಾಗುವುದೋ ಇಲ್ಲವೋ ಕೇಳಿ ತಿಳಿಸಿ ಎಂದು ಶ್ರೀಬೆನಕಪ್ಪನವರನ್ನು ಪ್ರಾರ್ಥಿಸಬೇಕು ; ಗುರುವಾರದ ದಿನದಂದು ಶ್ರೀಬೆನಕಪ್ಪನವರು ಶ್ರೀರಾಯರಲ್ಲಿ ಅವರುಗಳ

ಕೋರಿಕೆಯನ್ನು ವಿಜ್ಞಾಪಿಸಿ ಶ್ರೀಗುರುಗಳು ಕೊಟ್ಟ ಸಂದೇಶವನ್ನು ಅವರುಗಳಿಗೆ ತಿಳಿಸುತ್ತಿದ್ದರು.

**ಜನ್ಮನ್ಯಸ್ಮಿನ್ ದರ್ಶನಂ ಮೇ ನಾಸ್ತೀತ್ಯುಕ್ತಗೃಹಸ್ಥಕಃ ।**
**ವೇಂಕಣ್ಣಾರ್ಯಂ ನಿವೇದ್ಯೈತತ್ ಪುನಸ್ತೇನ ಸುಯಾಚಿತಃ ॥೨೨॥**

**ಏವಂ ದ್ವಿಜಪ್ರಾರ್ಥನಾಂ ಸ ಗುರುವರ್ಯಂ ನ್ಯವೇದಯತ್ ।**
**ಸ್ವಪ್ನೇ ತಸ್ಮೈ ದರ್ಶನಂ ಮೇ ದಾಸ್ಯಾಮೀತ್ಯವದದ್ಗುರುಃ ॥೨೩॥**

ನನ್ನ ದರ್ಶನವು ಈ ಜನ್ಮದಲ್ಲಿ (ವೆಂಕಣ್ಣಾಚಾರ್ಯರಿಗೆ) ಇಲ್ಲವೆಂದು (ಶ್ರೀರಾಯರಿಂದ) ಹೇಳಲ್ಪಟ್ಟ ಗೃಹಸ್ಥನಾದ ಬೆನಕಪ್ಪನು, ಈ ವಿಷಯವನ್ನು ವೆಂಕಣ್ಣಾಚಾರ್ಯರಿಗೆ ಹೇಳಿ ಮತ್ತು ಆ ವೆಂಕಣ್ಣಾಚಾರ್ಯರಿಂದ ಅತ್ಯಂತ ಪ್ರಾರ್ಥಿತನಾದ—

ಆ ಬೆನಕಪ್ಪನು ಈ ರೀತಿಯಾದ ಬ್ರಾಹ್ಮಣನ ಪ್ರಾರ್ಥನೆಯನ್ನು ಶ್ರೀರಾಘವೇಂದ್ರಗುರುಗಳಿಗೆ ಅರುಹಿದನು. ಶ್ರೀರಾಯರು ಆ ವೆಂಕಣ್ಣಾಚಾರ್ಯರಿಗೆ ನನ್ನ ದರ್ಶನವು ಸ್ವಪ್ನದಲ್ಲಿ ಕೊಡುವೆನು ಎಂದು ಹೇಳಿದರು.

ಅ. ವಿ. :— ವೆಂಕಣ್ಣಾಚಾರ್ಯರು ಬೆನಕಪ್ಪನಿಗೆ ನನಗೂ ನಿನ್ನಂತೆ ಶ್ರೀರಾಯರ ದರ್ಶನವನ್ನು ಮಾಡಿಸು ಎಂದು ಕೇಳಿದರು. ಬೆನಕಪ್ಪನು ವೆಂಕಣ್ಣಾಚಾರ್ಯರ ಅಭಿಪ್ರಾಯವನ್ನು ಶ್ರೀರಾಯರಲ್ಲಿ ವಿಜ್ಞಾಪಿಸಿದನು. ಶ್ರೀರಾಯರು, ಅವರಿಗೆ ಈ ಜನ್ಮದಲ್ಲಿ ನನ್ನ ದರ್ಶನವಾಗಲು ಸಾಧ್ಯವಿಲ್ಲ ಎಂದು ಅಪ್ಪಣೆಕೊಟ್ಟರು. ಒಂದು ಸಲವಾದರೂ ದರ್ಶನಕೊಡುವಂತೆ ಪ್ರಾರ್ಥಿಸು ಎಂದು ವೆಂಕಣ್ಣಾಚಾರ್ಯರು ಒತ್ತಾಯಪಡಿಸಿದರು. ಬೆನಕಪ್ಪನು ಮರು ಗುರುವಾರದಲ್ಲಿ ಆಚಾರ್ಯರ ಆಸೆಯನ್ನು ಬಿನ್ನವಿಸಿದನು. ಆಗ ಶ್ರೀಗುರು ಸಾರ್ವಭೌಮರು, ಪ್ರತ್ಯಕ್ಷದರ್ಶನಕೊಡಲು ಸಾಧ್ಯವಿಲ್ಲ ; ನಿರಂತರ ಸ್ವಪ್ನದಲ್ಲಿ ದರ್ಶನವನ್ನು ಕೊಡುವೆವು ಎಂದು ಅಪ್ಪಣೆಯನ್ನಿತ್ತರು. ಅದರಂತೆಯೇ ಪ್ರತಿ ದಿನವೂ ಸ್ವಪ್ನದಲ್ಲಿ ದರ್ಶನವನ್ನು ಕೊಡುತ್ತಿದ್ದರು.

**ಸೇವಕಾನಾಮಭೀಷ್ಟಂ ಚ ಗುರುಂ ಸ್ವಪ್ನೇ ನ್ಯವೇದಯನ್ ।**
**ಗುರೂಕ್ತಂ ಚೋತ್ತರಂ ಭಕ್ತಾನ್ ವೇಂಕಣ್ಣಾರ್ಯೋ ಜಗಾದ ಸಃ ॥**

ಆ ವೆಂಕಣ್ಣಾಚಾರ್ಯರು ಸೇವಕರ ಅಭೀಷ್ಟವನ್ನಾದರೂ ಸ್ವಪ್ನದಲ್ಲಿ (ಕನಸಿನಲ್ಲಿ) ಹೇಳಿದವರಾಗಿ ಶ್ರೀರಾಘವೇಂದ್ರಗುರುಗಳಿಂದ ಹೇಳಲ್ಪಟ್ಟ ಉತ್ತರವನ್ನು ಕೂಡಾ ಭಕ್ತರುಗಳಿಗೆ ಹೇಳುತ್ತಿದ್ದರು.

**ತದಾರಭ್ಯ ಬ್ರಾಹ್ಮಣಃಸ ಸ್ವಪ್ನೇತ್ಯುಪಪದೇನ ಹಿ ।**
**ಶ್ರುತೋ ಭೂತ್ವಾ ಗುರೋರ್ಗ್ರಾಮೇ ವಾಸಂ ಚಕ್ರೇ**
**ದ್ವಿಜೋತ್ತಮಃ ॥೨೫॥**

ಆ ಬ್ರಾಹ್ಮಣನಾದ ವೆಂಕಣ್ಣಾಚಾರ್ಯರು ಅಂದಿನಿಂದ ಸ್ವಪ್ನ ಎಂಬ ಉಪಪದದಿಂದ ಪ್ರಸಿದ್ಧರಾಗಿ (ಸ್ವಪ್ನದ ವೆಂಕಣ್ಣಾಚಾರ್ಯರೆಂದು ಪ್ರಸಿದ್ಧರಾಗಿ) ಶ್ರೀಗುರುಗಳ ಗ್ರಾಮದಲ್ಲಿ (ಮಂತ್ರಾಲಯದಲ್ಲಿ) ಇರುವಿಕೆಯನ್ನು ಮಾಡಿದರು.

**ಭುವನೇಂದ್ರಯತಿಃ ಕಸ್ಮಿನ್ ದಿನೇ ಮಂತ್ರಾಲಯಂ ಗತಃ ।**
**ದರ್ಶನಾರ್ಥಂ ಗುರೋಸ್ತತ್ರ ಬೆನಕಪ್ಪಂ ತದಾಽವದತ್ ॥೨೬॥**

ಒಂದಾನೊಂದು ದಿನದಲ್ಲಿ ಶ್ರೀಭುವನೇಂದ್ರತೀರ್ಥರು ಮಂತ್ರಾಲಯವನ್ನು ಹೊಂದಿದರು (ಮಂತ್ರಾಲಯಕ್ಕೆ ಬಂದರು) ಆಗ ಮಂತ್ರಾಲಯದಲ್ಲಿ ಶ್ರೀಗುರುಗಳ ದರ್ಶನಕ್ಕೋಸ್ಕರ ಬೆನಕಪ್ಪನನ್ನು ಕುರಿತು ಮಾತನಾಡಿದರು. (ನಿನ್ನಂತೆ ನಮಗೂ ಪ್ರತ್ಯಕ್ಷದರ್ಶನವನ್ನು ಮಾಡಿಸು ಎಂದು ಕೇಳಿದರು).

**ಯುತ್ಯುಕ್ತೋಗ್ರಾಮಣೀರ್ಗತ್ವಾ ರಾಘವೇಂದ್ರಂ ನ್ಯವೇದಯತ್ ।**
**ತಥೈವೇತಿ ಗುರೂಕ್ತಂ ಸ ಭುವನೇಂದ್ರಂ ನಿವೇದಯನ್ ॥೨೭॥**

ಶಾನುಭೋಗ ಬೆನಕಪ್ಪನು ಹೋಗಿ ಶ್ರೀಭುವನೇಂದ್ರಯತಿಗಳಿಂದ ಹೇಳಿದುದು ಶ್ರೀರಾಘವೇಂದ್ರತೀರ್ಥರಿಗೆ ಹೇಳಿದನು (ಪ್ರಾರ್ಥಿಸಿದನು). ಹಾಗೇ ಆಗಲಿ ಎಂದು (ಶ್ರೀಗುರುಗಳು ಹೇಳಿದರು) ಬೆನಕಪ್ಪನು (ಆ ವಿಷಯವನ್ನು) ಶ್ರೀಭುವನೇಂದ್ರರಿಗೆ ಹೇಳಿದವನಾಗಿ—

**ಸಹಿತೋ ಭುವನೇಂದ್ರೇಣ ಗುರುಗೇಹಂ ಪ್ರವಿಶ್ಯ ಸಃ ।**
**ತತ್ರೈವ ಶ್ರೀಗುರೋರ್ಮಾರ್ಗಂ ತದಾಪಶ್ಯನ್ನುಪಾವಿಶತ್ ॥೨೮॥**

ಶ್ರೀಭುವನೇಂದ್ರತೀರ್ಥರಿಂದ ಕೂಡಿದವನಾಗಿ ಆ ಬೆನಕಪ್ಪನು ಶ್ರೀರಾಯರ ಗುಡಿಯನ್ನು ಪ್ರವೇಶಿಸಿ ಅಲ್ಲಿಯೇ ಆಗ ಶ್ರೀಗುರುಗಳ ದಾರಿಯನ್ನು ನೋಡುವವನಾಗಿ ಕುಳಿತನು.

**ಗುರೋಃಪಾದಧ್ವನಿಸ್ತೇನ ಭುವನೇಂದ್ರೇಣ ಶುಶ್ರುವೇ ।**
**ತದೈವ ತಸ್ಯ ಸುಸ್ವಾಪಸ್ತದ್ವಿಘ್ನ ಇವ ಚಾಭವತ್ ॥೨೯॥**

ಆ ಶ್ರೀಭುವನೇಂದ್ರತೀರ್ಥರಿಂದ ಶ್ರೀ ಗುರುಗಳ ಪಾದಧ್ವನಿಯು (ಪಾವಿಗೆಯ ಧ್ವನಿಯು) ಕೇಳಲ್ಪಟ್ಟಿತು. ಆಗಲೇ ಶ್ರೀಯತಿಗಳಿಗೆ ದರ್ಶನಕ್ಕೆ ವಿಘ್ನವೋ ಎಂಬಂತೆ ಚೆನ್ನಾಗಿ ನಿದ್ರೆಯು ಬಂದಿತು.

**ನದ್ಯಾಽಽಗತೋ ರಾಘವೇಂದ್ರೋ ವೃಂದಾವನಮುಪಾವಿಶತ್ ।**
**ಗ್ರಾಮಣ್ಯೋದ್ಬೋಧಿತೋ ಭಿಕ್ಷುರ್ಗುರುವಸ್ತ್ರಂ ದದರ್ಶ ಸಃ ॥೩೦॥**

ನದಿಯಿಂದ ಬಂದ ಶ್ರೀರಾಘವೇಂದ್ರತೀರ್ಥರು ವೃಂದಾವನವನ್ನು ಪ್ರವೇಶಿಸಿದರು. ಬೆನಕಪ್ಪನಿಂದ ಎಚ್ಚಿಸಲ್ಪಟ್ಟ ಶ್ರೀಭುವನೇಂದ್ರತೀರ್ಥರು ಶ್ರೀಗುರುರಾಯರ ಶಾಟಿಯನ್ನು ನೋಡಿದರು.

**ಏಕಸ್ಮಿನ್ ದಿವಸೇ ನತ್ವಾ ವಾದೀಂದ್ರಯತಿರಾಡ್ಗುರುಮ್ ।**
**ಮಂತ್ರಾಲಯಂ ಸಮಾಗತ್ಯ ವೃಂದಾವನಪುರಃಸ್ಥಿತಃ ॥೩೦॥**

ಒಂದಾನೊಂದು ದಿನ ಯತಿಶ್ರೇಷ್ಠರಾದ ಶ್ರೀವಾದೀಂದ್ರತೀರ್ಥರು ಮಂತ್ರಾಲಯಕ್ಕೆ ಬಂದು ಶ್ರೀರಾಯರಿಗೆ ವಂದಿಸಿ, ಶ್ರೀರಾಯರ ವೃಂದಾವನದ ಮುಂದೆ ನಿಂತವರಾಗಿ—

**ಗುರೋರ್ಗುಣಾನಾಂ ಸ್ತವನಂ ಕೃತ್ವಾ ಪಠಿತವಾನ್ ಮುದಾ ।**
**ಉನ್ಮೀಲನ್ನೀಲಪ್ರಭೃತಿಶಾಖ್ಯಂತಂ ಭಾವಗರ್ಭಿತಂ ॥೩೨॥**

ಭಾವಗರ್ಭಿತವಾದ ಉನ್ಮೀಲನ್ನೀಲ (ಎಂದು) ಪ್ರಾರಂಭಿಸಿ ಶಾಖೀ (ಎಂದು) ಕೊನೆಯವರೆಗೆ ಶ್ರೀಗುರುಗಳ ಗುಣಗಳ ಸ್ತುತಿಯನ್ನು ಮಾಡಿ ಸಂತೋಷದಿಂದ ಪಠಿಸಿದರು. (36 ಶ್ಲೋಕಗಳುಳ್ಳ ಶ್ರೀಗುರುಗಳ ಗ್ರಂಥಗಳ ವರ್ಣನರೂಪವಾದ "**ಗುರುಗುಣಸ್ತವನ**" ಎಂಬ ಗ್ರಂಥವನ್ನು ಮಾಡಿ ಸ್ತುತಿಸಿದರು).

ವಾದೀಂದ್ರಪಠಿತಂ ಶ್ರುತ್ವಾ ಚಾಲಯಾಮಾಸ ಮಸ್ತಕಮ್ ।
ವೃಂದಾವನಸ್ಯ ಚಲನಂ ತತ್ರಸ್ಥಾ ದದೃಶುರ್ಮುದಾ ॥೩೩॥

ಶ್ರೀವಾದೀಂದ್ರತೀರ್ಥರಿಂದ ಹೇಳಲ್ಪಟ್ಟದ್ದನ್ನು ಕೇಳಿ (ಬೃಂದಾವನದಲ್ಲಿ ಕುಳಿತ ಶ್ರೀಗುರುಗಳು) ಸಂತೋಷದಿಂದ ತಲೆದೂಗಿದರು. ಅಲ್ಲಿರುವ ಜನರು ಬೃಂದಾವನದ ತೂಗುವಿಕೆಯನ್ನು ಕಂಡರು.

ವ್ಯಾಸತತ್ವಜ್ಞತೀರ್ಥಸ್ತು ಪಾಠಂ ಪರಿಮಳಂ ವಿನಾ ।
ಉಕ್ತವಾನ್ ಪ್ರತ್ಯಹಂ ಛಾತ್ರಾನ್ ವೇಣುಗೋಪಾಲಸನ್ನಿಧೌ ॥೩೪॥

ಶ್ರೀವ್ಯಾಸತತ್ವಜ್ಞತೀರ್ಥರಾದರೋ ಪ್ರತಿದಿವಸವೂ ಶ್ರೀವೇಣುಗೋಪಾಲ ದೇವರ ಸನ್ನಿಧಿಯಲ್ಲಿ ಪರಿಮಳವನ್ನು ಬಿಟ್ಟು (ಪರಿಮಳ ಎಂಬ ಟಿಪ್ಪಣಿಯನ್ನು ನೋಡದಲೇ) ಶಿಷ್ಯರುಗಳಿಗೆ (ಶ್ರೀಮನ್ನ್ಯಾಯ ಸುಧಾ ಎಂಬ ಗ್ರಂಥದ) ಪಾಠವನ್ನು ಹೇಳುತ್ತಿದ್ದರು.

ಛಾತ್ರೈಃ ಪರಿಮಳಂ ಪಶ್ಯೇತ್ಯುಕ್ತಃ ಸ ಗುರುರಬ್ರವೀತ್ ।
ಟಿಪ್ಪಣ್ಯಾ ಮೂಕಯಾ ಮೇ ಕಿಮಿತ್ಯುಚೇ ಛಾತ್ರಸಂಚಯಮ್ ॥೩೫॥

ಶಿಷ್ಯರುಗಳಿಂದ ಪರಿಮಳವು ನೋಡಲ್ಪಡಲಿ ಎಂದು ಹೇಳಲ್ಪಟ್ಟ ಆ ಗುರುಗಳಾದ ಶ್ರೀವ್ಯಾಸತತ್ವಜ್ಞರು ಮಾತನಾಡಿದರು. ಮೂಕಟಿಪ್ಪಣಿಯಿಂದ ನನಗೆ ಏನು (ಏನು ಪ್ರಯೋಜನವು) ಎಂದು ಶಿಷ್ಯಸಮೂಹವನ್ನು ಕುರಿತು ಹೇಳಿದರು.

ಕದಾಚಿತ್ಪಾಠಕಾಲೇ ಸ ವಾಕ್ಯೇ ಸಂಶಯಮಾಗತಃ ।
ಪರೇದ್ಯುಃಪ್ರೋಚ್ಯತೇ ಪಾಠಂ ಇತ್ಯುಕ್ತ್ವೋಪಾರಮದ್ಯತಿಃ ॥೩೬॥

ಒಂದಾನೊಂದು ಸಲ ಪಾಠದ ಸಮಯದಲ್ಲಿ ವಾಕ್ಯದಲ್ಲಿ ಸಂಶಯವು ಬಂದಿತು. (ಆಗ) ಆ ಶ್ರೀವ್ಯಾಸತತ್ವಜ್ಞರು ನಾಳೆಯ ದಿನ ಪಾಠವು ಹೇಳಲ್ಪಡುತ್ತದೆ. ಹೀಗೆಂದು ಹೇಳಲ್ಪಟ್ಟವರಾಗಿ ಉಪರಮಿಸಿದರು. (ಪಾಠ ಹೇಳುವುದನ್ನು ನಿಲ್ಲಿಸಿದರು).

ತಸ್ಮಿನ್ ದಿನೇ ರಾತ್ರಿಕಾಲೇ ತತ್ಸ್ವಪ್ನೇ ಶ್ರೀಗುರುರ್ಗತಃ ।
ಪಶ್ಯ ಮೇ ಟಿಪ್ಪಣೀಂ ಮೂಕಾಮಿತಿ ಪ್ರೋಚೇ ಸ್ವಶಿಷ್ಯಕಮ್ ॥೩೭॥

ಅಂದು ರಾತ್ರಿ **ಶ್ರೀವ್ಯಾಸತತ್ವಜ್ಞರ** ಕನಸಿನಲ್ಲಿ ಶ್ರೀರಾಘವೇಂದ್ರಗುರುಗಳು ಹೋದವರಾಗಿ (ಕನಸಿನಲ್ಲಿ ಕಂಡು) ತಮ್ಮ ಶಿಷ್ಯರನ್ನು (ಶ್ರೀವ್ಯಾಸತತ್ವಜ್ಞರನ್ನು) ಕುರಿತು ನನ್ನ ಮೂಕಟಿಪ್ಪಣಿಯನ್ನು ನೋಡು ಎಂದು ಆಜ್ಞಾಪಿಸಿದರು.

**ರಾತ್ರೌ ದೃಷ್ಟ್ವಾ ಪರಿಮಳಮುಭೂನ್ಮುಕ್ತಸ್ತು ಸಂಶಯಾತ್ ।**
**ಸರ್ವಂ ಸ್ವಪ್ನಗತಂ ವೃತ್ತಂ ಶಿಷ್ಯೇಭ್ಯಶ್ಚ ನ್ಯವೇದಯತ್ ॥೩೮॥**

(ತಕ್ಷಣವೇ ಎದ್ದು) ರಾತ್ರಿಯಲ್ಲಿ ಪರಿಮಳವನ್ನು ನೋಡಿ ಸಂಶಯದಿಂದ ಮುಕ್ತರಾದರು. ಮತ್ತು ಸ್ವಪ್ನದಲ್ಲಿ ನಡೆದ ಎಲ್ಲ ಸಮಾಚಾರವನ್ನು ಶಿಷ್ಯರಿಗೆ ತಿಳಿಸಿದರು.

**ಮಯಾ ಮಂತ್ರಾಲಯೋ ಗಮ್ಯಃಸ್ಪೃಶ್ಯಂ ವೃಂದಾವನಂತ್ವಿತಿ ।**
**ಮನಶ್ಚಕ್ರೇ ತದ್ದಿನೇ ಸ ವ್ಯಾಸತತ್ವಜ್ಞನಾಮಕಃ ॥೩೯॥**

ಆ ಶ್ರೀವ್ಯಾಸತತ್ವಜ್ಞರು (ಪರಿಮಳಟಿಪ್ಪಣಿಯ ಘನತೆಯಿಂದ ಭಾವುಕರಾಗಿ) ನನ್ನಿಂದ ಮಂತ್ರಾಲಯವು ಗಮ್ಯವು, ಶ್ರೀಬೃಂದಾವನವು ಸ್ಪೃಶ್ಯವು (ನಾನು ಮಂತ್ರಾಲಯಕ್ಕೆ ಹೋಗಬೇಕು, ಶ್ರೀರಾಯರ ಬೃಂದಾವನಸ್ಪರ್ಶ ಮಾಡಬೇಕು) ಎಂದು ಅಂದಿನ ದಿನ ಮನಸ್ಸು ಮಾಡಿದರು.

**ತಸ್ಯ ಸ್ವಪ್ನೇ ಗುರುರ್ಗತ್ವಾ ವೃದ್ಧಸಂನ್ಯಾಸಿರೂಪಧೃಕ್ ।**
**"ಶೀರ್ಷೇ ಮೇ ತಾಡನೇಚ್ಛಾ ತೇ ಕುತೋ ಜಾತೇತಿ"ಚೋಕ್ತವಾನ್ ॥**

ವೃದ್ಧಸಂನ್ಯಾಸಿಯ ರೂಪವನ್ನು ಧರಿಸಿ ಶ್ರೀಗುರುರಾಯರು ಆ ಶ್ರೀವ್ಯಾಸತತ್ವಜ್ಞರ ಕನಸಿನಲ್ಲಿ ಹೋಗಿ (ಕಾಣಿಸಿ) ನನ್ನ ತಲೆಯಲ್ಲಿ ಹೊಡೆಯುವ ಇಚ್ಛೆಯು ಏಕೆ ಹುಟ್ಟಿತು ಎಂದು ಕೇಳಿದರು.

**ಅರ್ಚಕಾನಾಂ ಪದೋಽಶ್ಚಾಪಿ ತಾಡನಂ ಸಹಸೇ ಕಥಮ್ ?**
**ಏವಮುಕ್ತೋ ಗುರುಃಪ್ರೋಚೇ ಸುಖಂ ಪುತ್ರಸುತಾಡನಂ ।**
**ಸಹೇಽಹಮಿತ್ಯಭಿಹಿತೋ ದೃಷ್ಟ್ವಾ ವೃಂದಾವನಂ ಯಯೌ ॥೪೦॥**

ಅರ್ಚಕರುಗಳ ಪಾದದ ತಾಡನವನ್ನಾದರೂ ಹೇಗೆ ಸಹಿಸುವಿರಿ ಎಂದು (ಶ್ರೀವ್ಯಾಸತತ್ವಜ್ಞರಿಂದ) ಕೇಳಲ್ಪಟ್ಟ ಶ್ರೀಗುರುರಾಘವೇಂದ್ರರು ಹೇಳಿದರು— ಮಕ್ಕಳುಗಳಿಂದ ಮಾಡಲ್ಪಡುವ ತಾಡನವು ಸುಖವು (ಕಾರಣ ಅದನ್ನು)

ಸಹಿಸುವೆ, ಹೀಗೆ ಹೇಳಲ್ಪಟ್ಟ (ಶ್ರೀವ್ಯಾಸತತ್ವಜ್ಞರು ಮಂತ್ರಾಲಯಕ್ಕೆ ಬಂದು) ಶ್ರೀಬೃಂದಾವನವನ್ನು ದರ್ಶನಮಾಡಿ ಪ್ರಯಾಣ ಮಾಡಿದರು.

**ಅ. ವಿ. :**— ಶ್ರೀವ್ಯಾಸತತ್ವಜ್ಞತೀರ್ಥರು ಮೂಕಟಿಪ್ಪಣೀ ಎಂದು ಅನಾದರವನ್ನು ತೋರಿದ **ಶ್ರೀಪರಿಮಳಟಿಪ್ಪಣಿಯಿಂದಲೇ,** ಪಾಠವನ್ನು ಹೇಳುವಾಗ ತಮಗೆ ಬಂದ ಸಂಶಯವು ಪರಿಹಾರವಾದಪ್ರಯುಕ್ತ, ಅನಾದರ ವನ್ನು ತೋರಿದ ಬಗ್ಗೆ ಪಶ್ಚಾತ್ತಪ್ತರಾಗಿ, ಶ್ರೀರಾಯರಲ್ಲಿ ಹೋಗಿ ಶ್ರೀಬೃಂದಾ ವನವನ್ನು ಸ್ಪರ್ಶಮಾಡಿ ಅಪರಾಧವನ್ನು ಕ್ಷಮಿಸುವಂತೆ ಪ್ರಾರ್ಥಿಸಬೇಕೆಂದು ಮನದಲ್ಲಿ ನಿಶ್ಚಯಿಸಿದರು. ಅಂದು ರಾತ್ರಿ ಸ್ವಪ್ನದಲ್ಲಿ ಶ್ರೀರಾಯರು ಕಾಣಿಸಿ ಕೊಂಡು ವೃಂದಾವನದ ಅತಿಸನಿಹದ ಪ್ರದೇಶ ಯಾವತ್ತೂ ನಮ್ಮ ತಲೆ ಇದ್ದಂತೆ. ನೀನು ಆ ಪ್ರದೇಶದಲ್ಲಿ ಬಂದರೆ ನನ್ನ ತಲೆಯ ಮೇಲೆ ಕಾಲಿನಿಂದ ಹೊಡೆದಂತೆ (ತುಳಿದಂತೆ) ಆಗುತ್ತದೆ, ಕಾರಣ ಆ ಅಪೇಕ್ಷೆಯನ್ನು ಮಾಡಬೇಡ ಎಂದು ಹೇಳಿದರು. ಆಗ ಶ್ರೀವ್ಯಾಸತತ್ವಜ್ಞರು, ಗೃಹಸ್ಥಾಶ್ರಮಿಗಳಾದ ಅರ್ಚಕರು ತುಳಿಯುತ್ತಾರೆ, ನಾನು ಯತ್ಯಾಶ್ರಮದಲ್ಲಿರುವವನು ತುಳಿದರೆ ತಪ್ಪೇ ಎಂದು ಪ್ರಶ್ನಿಸಲು, ಅರ್ಚಕರು ಎಂದರೆ ಮಕ್ಕಳಿದ್ದಂತೆಯೇ, ಚಿಕ್ಕ ಮಕ್ಕಳ ಕಾಲಿನ ಹೊಡೆತವು ತಂದೆಗೆ ಹೇಗೆ ಸಂತೋಷಕರವೋ ಹಾಗೆಯೇ ನನಗೆ ಅರ್ಚಕರ ತುಳಿತವು ಸುಖಕರವು ಎಂದು ಹೇಳಲು, **ಶ್ರೀವ್ಯಾಸತತ್ವಜ್ಞರು** ಸ್ಪರ್ಶದ ಯೋಚನೆಯನ್ನು ಬಿಟ್ಟು, ಮಂತ್ರಾಲಯಕ್ಕೆ ಬಂದು ಶ್ರೀರಾಘವೇಂದ್ರ ಗುರುಸಾರ್ವಭೌಮರ ದರ್ಶನವನ್ನು ಪಡೆದು ವಂದಿಸಿ ಪ್ರಯಾಣಮಾಡಿದರು.

**ದಿನೇ ದಿನೇ ಚಾತ್ರ ಯಶೋಽಭಿವರ್ಧನಮ್ ।**
**ಭವೇದಿತಿ ಶ್ರೀವಿಜಯಾರ್ಯಭಾಷಣಮ್ ॥**
**ಗಿರಾವಿವ ಶ್ರೀನಿಲಯಸ್ಯ ನಿಶ್ಚಯಮ್ ।**
**ಸುದೃಷ್ಟಿಗಂ ಸ್ಯಾದಿಹ ಪಶ್ಯತಾಂ ನೃಣಾಮ್** ॥೪೨॥

ಇಲ್ಲಿ (ಮಂತ್ರಾಲಯದಲ್ಲಿ) ಪ್ರತಿದಿನದಲ್ಲಿಯೂ ಕೀರ್ತಿಯ ಅಭಿವೃದ್ಧಿಯು ಆಗುವುದು, ಇಲ್ಲಿ ನೋಡುವ ಜನರಿಗೆ ಶ್ರೀನಿಲಯನ (ಶ್ರೀಶ್ರೀನಿವಾಸನ) ಬೆಟ್ಟದಂತೆ ಮಹಿಮಾತಿಶಯ ಆಗುವುದು ಎಂದು **ಪೂಜ್ಯಶ್ರೀವಿಜಯ ದಾಸರ** ಹೇಳಿಕೆಯು (ಶ್ರೀವಿಜಯದಾಸರು ಹೇಳಿರುವರು).

ಜ್ಞಾನೇನ ಮೋಕ್ಷಮುಭಿಯಾಂತಿ ಕೃತೇ ಯುಗೇ ತು ।
ತ್ರೇತಾಯುಗೇ ಯಜನಮೇವ ವಿಮುಕ್ತಿದಾಯಿ ॥
ಶ್ರೇಷ್ಠತೃತೀಯಯುಯುಗಕೇ ಹರಿಪೂಜಯಾಹು–
ಶ್ಚಾಸ್ಮಿನ್ ಯುಗೇಽಣುವಿಜಯೋ ಹಿ ಸುಭಕ್ತಿದೋಽಸ್ತಿ ॥೪೩॥

ಕೃತಯುಗದಲ್ಲಾದರೋ ಜ್ಞಾನದಿಂದ ಮೋಕ್ಷವನ್ನು ಹೊಂದುತ್ತಾರೆ. ತ್ರೇತಾಯುಗದಲ್ಲಿ ಯಾಗವೇನೇ ಮುಕ್ತಿಯನ್ನು ಕೊಡುವುದು, ಶ್ರೇಷ್ಠವಾದ ಮೂರನೆಯುಗದಲ್ಲಿ ಶ್ರೀರುಕ್ಮಿಣೀಶನ ಪೂಜೆಯಿಂದ (ಮೋಕ್ಷವು ಎಂದು) ಹೇಳುವರು, ಈ ಕಲಿಯುಗದಲ್ಲಿ **ಶ್ರೀರಾಘವೇಂದ್ರಾಣುವಿಜಯವು** ಒಳ್ಳೇ ಭಕ್ತಿಯನ್ನು (ತದ್ವಾರಾ ಶ್ರೀಹರಿಪ್ರಸಾದರೂಪಮೋಕ್ಷವನ್ನು) ಕೊಡುವುದು ಆಗಿರುತ್ತದೆ. ನಿಶ್ಚಯವು.

ದೇವೇಜ್ಯೇ ದಿವಸೇ ಸುನಿರ್ಮಲಧಿಯೋ ಭೂತ್ವಾ ಗುರೋಃಸನ್ನಿಧೌ ।
ಯತ್ಪಾಠಂ ಮನುಜಾಃಸುಭಕ್ತಿವಶಗಾಃಕುರ್ವಂತಿ ಮಂತ್ರಾಲಯೇ ॥
ತೇಷಾಂ ಸೋಽಣುಸುರಾಘವೇಂದ್ರವಿಜಯಃಸ್ವಃಕಾಮಧೇನುರ್ಯಥಾ ।
ಸರ್ವಾಭೀಷ್ಟಸುಸಾಧನೇ ಪಟುರಯಂ ಸದ್ಭಕ್ತಿದಾಯೀ ತಥಾ ॥೪೪॥

ಅತ್ಯಂತಭಕ್ತಿಯುಕ್ತರಾದ ಮಾನವರು ಮಂತ್ರಾಲಯದಲ್ಲಿ ಶ್ರೀರಾಘವೇಂದ್ರಗುರುಗಳ ಸನ್ನಿಧಿಯಲ್ಲಿ ಗುರುವಾರದ ದಿವಸದಲ್ಲಿ ಒಳ್ಳೆಯ ನಿರ್ಮಲಬುದ್ಧಿ ಉಳ್ಳವರಾಗಿ ಯಾವ **ಶ್ರೀರಾಘವೇಂದ್ರಾಣುವಿಜಯವನ್ನು** ಪಾರಾಯಣ ಮಾಡುವರೋ ಅವರುಗಳಿಗೆ ಸ್ವರ್ಗದ ಕಾಮಧೇನುವು ಹೇಗೋ ಹಾಗೆ **ಶ್ರೀರಾಘವೇಂದ್ರಾಣುವಿಜಯವು** ಎಲ್ಲ ಅಭೀಷ್ಟಗಳನ್ನು ಚೆನ್ನಾಗಿ ಪೂರೈಸುವುದರಲ್ಲಿ ಸಾಮರ್ಥ್ಯವುಳದ್ದು. ಈ ಅಣುವಿಜಯವು ಸದ್ಭಕ್ತಿಯನ್ನು ಕೊಡತಕ್ಕಂತಹದು.

ಅಬ್ದೇ ರಾಕ್ಷಸಸಂಜ್ಞಕೇ ಗುರುದಿನೇ ಸತ್ಕಾರ್ತಿಕೇ ಮಾಸಕೇ ।
ಪಕ್ಷೇ ತ್ವಿಂದುವಿವರ್ಧನೇ ಗುರುಜಯಃಶ್ರೀಪಂಚಮೀನಾಮಕೇ ॥
ರಾಮಾರ್ಯಸ್ಯ ಸುತೇನ ಮಂತ್ರಸದನೇ ಶ್ರೀಸದ್ಗುರುಂ ಹ್ಯರ್ಚತಾ ।
ವೇದವ್ಯಾಸಸುನಾಮಕೇನ ಚ ಗುರೋಃಪ್ರೀತ್ಯೈ ಕೃತಃಶ್ರೀಶಯೋಃ ॥

ರಾಕ್ಷಸಸಂಜ್ಞಕವಾದ ವರ್ಷದಲ್ಲಿ (ರಾಕ್ಷಸಸಂವತ್ಸರದಲ್ಲಿ) ಕಾರ್ತಿಕ ಮಾಸದಲ್ಲಿ, ಚಂದ್ರಬೆಳೆಯುವ ಪಕ್ಷದಲ್ಲಿ (ಶುಕ್ಲಪಕ್ಷದಲ್ಲಿ) ಪಂಚಮೀ ತಿಥಿಯಲ್ಲಿ ಗುರುವಾರದ ದಿನದಲ್ಲಿ ಶ್ರೀಗುರುಗಳ ವಿಜಯ ಎಂಬ ಗ್ರಂಥವು (ಶ್ರೀರಾಘವೇಂದ್ರ ಅಣುವಿಜಯವೆಂಬ ಗ್ರಂಥವು) ಮಂತ್ರಾಲಯದಲ್ಲಿ ಸದ್ಗುರುಗಳಾದ ಶ್ರೀರಾಘವೇಂದ್ರಗುರುಸಾರ್ವಭೌಮರನ್ನು ಪೂಜಿಸುವ ಶ್ರೀರಾಮಾಚಾರ್ಯರ ಮಕ್ಕಳಾದ **ಶ್ರೀವೇದವ್ಯಾಸಾಚಾರ್ಯ** ಎಂಬ ಹೆಸರುಳ್ಳವರಿಂದ ಶ್ರೀಗುರುಗಳ ಹಾಗೂ ಶ್ರೀಮಹಾಲಕ್ಷ್ಮೀದೇವಿಶ್ರೀಪರಮಾತ್ಮರ ಪ್ರೀತಿಗೋಸ್ಕರ ಮಾಡಲ್ಪಟ್ಟಿತು.

**ಇತಿ ಶ್ರೀಮದ್ರಾಘವೇಂದ್ರಗುರ್ವರ್ಚಕರಾಮಾಚಾರ್ಯಸುತ ವೇದವ್ಯಾಸಾಚಾರ್ಯವಿರಚಿತೇ ಶ್ರೀಮದ್ರಾಘವೇಂದ್ರಾಣುವಿಜಯೇ ಪಂಚಮಸ್ಸರ್ಗಃಸಮಾಪ್ತಃ ॥**

ಹೀಗೆ ಶ್ರೀರಾಘವೇಂದ್ರಗುರುಗಳ ಅರ್ಚಕರಾದ ಶ್ರೀರಾಮಾಚಾರ್ಯರ ಮಕ್ಕಳಾದ **ಶ್ರೀವೇದವ್ಯಾಸಾಚಾರ್ಯ**ರಿಂದ ವಿರಚಿತವಾದ **ಶ್ರೀರಾಘವೇಂದ್ರಾಣುವಿಜಯ**ದಲ್ಲಿ ಐದನೆಯ ಸರ್ಗವು ಮುಗಿಯಿತು.

**ವಿ. ಸೂ. :—** ಈ ಗ್ರಂಥವನ್ನು ಬರೆದ ಅರ್ಚಕ **ಶ್ರೀವೇದವ್ಯಾಸಾಚಾರ್ಯ**ರು, ಶ್ರೀರಾಯರಿಂದ ಪೂಜೆಗೆ ಆಜ್ಞಪ್ತರಾದ, ದಿವಾನ್ ವೆಂಕಣ್ಣ ಪಂಡಿತರಿಂದ ಶ್ರೀರಾಯರ ಮೂಲಬೃಂದಾವನದ ದಾನಪತ್ರವನ್ನು ಪಡೆದ, ಅರ್ಚಕರ ಮೂಲಪುರುಷರಾದ **ಶ್ರೀತಿಮ್ಮಣ್ಣಾಚಾರ್ಯ**ರಿಂದ ಹತ್ತನೆಯವರು.

ಶ್ರೀಮೂಲಬೃಂದಾವನದ ದಾನಪತ್ರವನ್ನು ನೋಡಬಯಸುವವರು, ವಿದ್ವಾನ್ ಅರ್ಚಕ ಶ್ರೀರಾಘವೇಂದ್ರಾಚಾರ್ಯರ ಮನೆಯಲ್ಲಿ ನೋಡಬಹುದು.

**ಶ್ರೀರುಕ್ಮಿಣೀಶಾರ್ಪಣಮಸ್ತು ॥**

